ಪರಮದಯಾಮಯ ಕರುಣಾಳುವಾದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಫಿಕ್ಹ್ ಪಾಠಗಳು-II ಎಂಬ ಈ ಕೃತಿಯು ಮದ್ರಸಗಳ 6ನೇ ಮತ್ತು 7ನೇ ತರಗತಿಗಾಗಿ ತಯಾರಿಸಿದುದಾಗಿದೆ. ಇದರಲ್ಲಿ ಝಕಾತ್, ಫಿತ್ರ್ ಝಕಾತ್, ಉಪವಾಸ ವ್ರತ, ಹಜ್ಜ್-ಉಮ್ರಾ ಎಂಬೀ ವಿಷಯಗಳಲ್ಲಿ ಸಂಬಂಧಿಸಿ ವಿಧಿ ವಿಧಾನಗಳನ್ನು ಮಕ್ಕಳಿಗೆ ಅರ್ಥವಾಗುವ ರೀತಿಯಲ್ಲಿ ಸರಳ ಸುಂದರವಾಗಿ ಅಳವಡಿಸಲಾಗಿದೆ. ವಸ್ತ್ರಧಾರಣೆ, ಉದ್ಯೋಗ, ವ್ಯಾಪಾರ, ವಕ್ಫ್, ದಾನ, ಲೇವಾದೇವಿ, ಮಾದಕ ಪದಾರ್ಥಗಳಿಗೆ ಸಂಬಂಧಿಸಿದ ನಿಯಮ-ನಿರ್ದೇಶಗಳನ್ನೂ ಇದರಲ್ಲಿ ಕಾಣಬಹುದು. ಪ್ರತಿಯೊಂದು ಪಾಠದ ಕೊನೆಯಲ್ಲಿ ಪಾಠದ ಸಾರಾಂಶದ ಪುನರಾವರ್ತನೆ ಹಾಗೂ ಪ್ರಶ್ನೆಗಳನ್ನು ಸೇರಿಸಿದ್ದು ಮಕ್ಕಳಿಗೆ ಅಭ್ಯಾಸ ಮಾಡಲು ಸುಲಭವಾಗುತ್ತದೆ.

ಈ ಮುಂಚೆ ಪ್ರಕಟವಾದ ಈ ಪುಸ್ತಕದ ಭಾಗ-Iರಲ್ಲಿ ನಮಾಝ್, ಸುನ್ನತ್ ನಮಾಝ್‌ಗಳು ಹಾಗೂ ಜನಾಝಾ ನಮಾಝ್‌ನ ಕುರಿತಾದ ವಿಧಿ ವಿಧಾನಗಳು ವಿವರಿಸಲ್ಪಟ್ಟಿದೆ. ಪ್ರಸ್ತುತ ಎರಡೂ ಭಾಗಗಳನ್ನು ಕೇವಲ ಕರ್ಮಶಾಸ್ತ್ರ ಪರವಾಗಿ ಅಧ್ಯಯನ ನಡೆಸುವುದರ ಜೊತೆಗೆ ಇಸ್ಲಾಮಿನ ಆರಾಧನಾ ಕರ್ಮಗಳಾದ ನಮಾಝ್, ಝಕಾತ್, ಉಪವಾಸ ವ್ರತ ಮತ್ತು ಹಜ್ಜ್‌ನ ಧ್ಯೇಯೋದ್ದೇಶಗಳನ್ನು ತಿಳಿಸುವಂತೆ ರಚಿಸಲಾಗಿದೆ.

ಈ ಕೃತಿಗಳು ಕೇವಲ ಮದ್ರಸ-ಶಾಲೆಗಳಲ್ಲಿ ಕಲಿಯುತ್ತಿರುವ ವಿದ್ಯಾರ್ಥಿ-ವಿದ್ಯಾರ್ಥಿನಿಗಳಿಗಷ್ಟೇ ಆಗಿರದೆ, ದೈನಂದಿನ ಬದುಕಿನಲ್ಲಿ ಪಾಲಿಸಬೇಕಾದ ನಿಯಮಗಳನ್ನು ಕಲಿಯಲಿಚ್ಛಿಸುವ ಸಾಮಾನ್ಯ ಜನರಿಗೂ ಇದರಿಂದ ಪ್ರಯೋಜನವಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

## ಪಾಠ-1

# ಝಕಾತ್

# اَلزَّكَاة

ಮನುಷ್ಯರಲ್ಲಿ ಹಲವು ರೀತಿಯವರಿದ್ದಾರೆ. ಕೆಲವರು ಬುದ್ಧಿವಂತರು, ಕೆಲವರು ದುರ್ಬಲರು, ಕೆಲವರು ಶಕ್ತರು, ಇನ್ನು ಕೆಲವರು ಅಶಕ್ತರು, ಕೆಲವರು ಆರ್ಥಿಕವಾಗಿ ಶ್ರೀಮಂತರು, ಇನ್ನು ಕೆಲವರು ಬಡವರು. ಈ ರೀತಿಯ ವೈವಿಧ್ಯಗಳಿಂದ ಅಲ್ಲಾಹನು ಮನುಷ್ಯರನ್ನು ಸೃಷ್ಟಿಸಿದ್ದಾನೆ.

اَللّٰهُ يَبْسُطُ الرِّزْقَ لِمَنْ يَشَآءُ وَ يَقْدِرُ (الرعد)

"ಅಲ್ಲಾಹನು ತನಗಿಷ್ಟವಿದ್ದವರಿಗೆ ಜೀವನಾಧಾರವನ್ನು ವಿಪುಲಗೊಳಿಸುತ್ತಾನೆ ಮತ್ತು ತನಗಿಷ್ಟವಿದ್ದವರಿಗೆ ಪರಿಮಿತಗೊಳಿಸಿಕೊಡುತ್ತಾನೆ."

ಮನುಷ್ಯ ಸಮುದಾಯದ ಅಸ್ತಿತ್ವಕ್ಕೂ ಪ್ರಗತಿಗೂ ಈ ವೈವಿಧ್ಯ ಅನಿವಾರ್ಯವಾಗಿದೆ. ಆದುದರಿಂದಲೇ ಯುಕ್ತಿಜ್ಞನೂ ಕರುಣಾಮಯಿಯೂ ಆದ ಅಲ್ಲಾಹನು ಮನುಷ್ಯರನ್ನು ಈ ವೈವಿಧ್ಯಗಳಿಂದ ಸೃಷ್ಟಿಸಿದ್ದಾಗಿರಬಹುದು.

ಹಾಗಿದ್ದರೆ ಸಮಾಜದಲ್ಲಿ ಹಸಿವಿನಿಂದ ನರಳುವವರು, ಬಡವರು ಮತ್ತು ನಿರ್ಗತಿಕರು ಸದಾ ದುಸ್ಥಿತಿಯಲ್ಲಿಯೇ ಬದುಕಬೇಕೆಂದು ಅಲ್ಲಾಹನ ನಿರ್ಧಾರವಾಗಿದೆಯೇ?

ಖಂಡಿತಾ ಅಲ್ಲ. ಅಲ್ಲಾಹನು ಸ್ವಪರಿಶ್ರಮದಿಂದ ಸಮಸ್ಯೆಯ ಪರಿಹಾರ ಕಂಡುಕೊಳ್ಳಲು ಸಾಧ್ಯವಿಲ್ಲದವರನ್ನು ಮೇಲೆತ್ತುವುದು. ಅವರ ಆರ್ಥಿಕ ಸಮಸ್ಯೆಗಳನ್ನು ಪರಿಹರಿಸುವುದು. ಶ್ರೀಮಂತರ ಹೊಣೆಯೆಂದು ನಿಶ್ಚಯಿಸಿದ್ದಾನೆ. ಹೀಗೆ ಧನಿಕರು, ಅವರ ವರಮಾನ ಮತ್ತು ಸೊತ್ತಿನಲ್ಲಿ ನಿಗದಿಪಡಿಸಿರುವ ಪಾಲನ್ನು ಬಡವರೇ ಮುಂತಾದವರಿಗೆ ನೀಡುವುದನ್ನೇ 'ಝಕಾತ್' ಎನ್ನಲಾಗಿದೆ.

ಪ್ರವಾದಿವರ್ಯರು(ಸ) ಹೇಳುತ್ತಾರೆ;

تُؤْخَذُ مِنْ أَغْنِيَائِهِمْ وَ تُرَدُّ عَلٰى فُقَرَائِهِمْ

"ಅದನ್ನು ಅವರಲ್ಲಿರುವ ಧನಿಕರಿಂದ ಸಂಗ್ರಹಿಸಬೇಕು ಮತ್ತು ಬಡವರಿಗೆ ಮರಳಿಸಬೇಕಾಗಿದೆ"

ಇದು ಶ್ರೀಮಂತರ ಔದಾರ್ಯವೇನಲ್ಲ ಬಡವರ ಹಕ್ಕಾಗಿದೆ.

ಪವಿತ್ರ ಕುರ್‌ಆನ್ ಹೇಳುತ್ತದೆ;

وَفِي أَمْوَالِهِمْ حَقٌّ لِلسَّائِلِ وَالْمَحْرُوم (الذّاريات)

**"ಅವರ ಸೊತ್ತುಗಳಲ್ಲಿ ಬೇಡುವವರಿಗೂ ವಂಚಿತರಿಗೂ ಹಕ್ಕು ಇದೆ."**

ಝುಕಾತ್ ಇಸ್ಲಾಮಿನ ಪಂಚ ಸ್ಥಂಭಗಳಲ್ಲಿ ಒಂದಾಗಿದೆಯೆಂದು ನೀವು ಕಲಿತಿರುವಿರಲ್ಲವೇ! ನಮಾಝ್‌ನಂತೆ ಅದು ತುಂಬ ಪ್ರಮುಖವಾದ ಒಂದು ಆರಾಧನೆಯಾಗಿದೆ. ಪವಿತ್ರ ಕುರ್‌ಆನ್‌ನಲ್ಲಿ ನಮಾಝ್‌ನ ಜೊತೆಯಲ್ಲಿ ಝುಕಾತನ್ನು ಮೂವತ್ತಕ್ಕೂ ಅಧಿಕ ಕಡೆಗಳಲ್ಲಿ ಪರಾಮರ್ಶಿಸಲಾಗಿದೆ. ಈ ವಿಷಯದಲ್ಲಿ ಧಾರಾಳ ಹದೀಸ್‌ಗಳೂ ಇವೆ.

ಝುಕಾತ್ ಕಡ್ಡಾಯವೆಂಬುದನ್ನು ನಿರಾಕರಿಸಿದರೆ ಮತ್ತು ಸಾಮರ್ಥ್ಯಗಳಿದ್ದೂ ಅದನ್ನು ಮನಪೂರ್ವಕವಾಗಿ ನೀಡದಿದ್ದರೆ ಅವನು ಇಸ್ಲಾಮಿ ವೃತ್ತದಿಂದಲೇ ಹೊರಹೋಗುವನು.

ಅಲ್ಲಾಹನು ಹೇಳುತ್ತಾನೆ;

وَوَيْلٌ لِلْمُشْرِكِينَ الَّذِينَ لَا يُؤْتُونَ الزَّكَاةَ وَهُمْ بِالْآخِرَةِ هُمْ كَافِرُونَ

(فصلت)

**"ಝುಕಾತ್ ನೀಡದ ಪರಲೋಕವನ್ನು ನಿಷೇಧಿಸುವ ಬಹುದೇವ ವಿಶ್ವಾಸಿಗಳಿಗೆ ವಿನಾಶ ಕಾದಿದೆ"**

ಪ್ರವಾದಿವರ್ಯರು(ಸ) ನಿಧನರಾದ ನಂತರ ಖಿಲಾಫತನ್ನು ಹ. ಅಬೂಬಕರ್(ಅ) ವಹಿಸಿಕೊಂಡಾಗ ಕೆಲವರು ಝುಕಾತ್ ನೀಡಲು ನಿರಾಕರಿಸಿದರು. ಆಗ ಖಲೀಫಾ ಅಬೂಬಕರ್(ರ) ಅವರ ಮೇಲೆ ಯುದ್ಧ ಮಾಡಿದರು ಮತ್ತು ಹೀಗೆ ಘೋಷಿಸಿದರು,

"ಅಲ್ಲಾಹನಾಣೆ! ನಮಾಝ್ ಮತ್ತು ಝುಕಾತ್‌ನ ನಡುವೆ ವ್ಯತ್ಯಾಸ ಮಾಡುವವರೊಂದಿಗೆ ನಾನು ಯುದ್ಧವನ್ನೇ ಮಾಡುತ್ತೇನೆ."

ವಿವಿಧ ಪ್ರಕಾರದ ಸೊತ್ತುಗಳನ್ನು ನಿಗದಿತ ಪ್ರಮಾಣದಲ್ಲಿ ಹೊಂದಿರುವವರು ಝುಕಾತ್ ಪಾವತಿಸಲು ಬಾಧ್ಯಸ್ತರಾಗಿದ್ದಾರೆ. ಈ ನಿಗದಿತ ಪ್ರಮಾಣವನ್ನು ನಿಸಾಬ್ (نِصَاب) ಎಂದು ಕರೆಯಲಾಗುತ್ತದೆ. ಬೇರೆ ಬೇರೆ ಸೊತ್ತಿಗೆ ಬೇರೆ ಬೇರೆ

ನಿಸಾಬ್(ಪ್ರಮಾಣ)ಗಳಿವೆ. ಸಾಲದ ಬಾಧ್ಯತೆಯಿರುವವರು ಅದನ್ನು ಕಳೆದು ಉಳಿಯುವ ನಿಸಾಬ್(ಪ್ರಮಾಣ)ನಷ್ಟಾಗುವುದಾದರೆ ಝುಕಾತ್ ನೀಡಿದರೆ ಸಾಕಾಗುತ್ತವೆ. ಝುಕಾತ್ ಕಡ್ಡಾಯಗೊಂಡಿರುವ ವ್ಯಕ್ತಿ ಪಾವತಿಸದೆ ಮೃತನಾದರೆ ಅವನ ವಾರಿಸುದಾರರು ಅವನ ಸೊತ್ತಿನಿಂದ ಪಾವತಿಸಬೇಕು.

**ನಾವೇನು ಕಲಿತೆವು?**

1. ಬಡವರ ಆರ್ಥಿಕ ಸಂಕಷ್ಟಗಳನ್ನು ಪರಿಹರಿಸುವುದು ಶ್ರೀಮಂತರ ಹೊಣೆಯಾಗಿದೆ.
2. ಸಾಮರ್ಥ್ಯವುಳ್ಳವರು ಅವರ ಎಲ್ಲ ರೀತಿಯ ಸಂಪತ್ತಿಗ ಝುಕಾತ್ ನೀಡಬೇಕು.
3. ಝುಕಾತ್ ಧನಿಕರ ಔದಾರ್ಯವಲ್ಲ. ಬಡವರ ಹಕ್ಕಾಗಿದೆ.
4. ಝುಕಾತ್‌ಗೆ ಕಡ್ಡಾಯವಾದ ನಿಗದಿತ ಪ್ರಮಾಣವನ್ನು ನಿಸಾಬ್ ಎಂದು ಕರೆಯಲಾಗುವುದು.

ಅಭ್ಯಾಸ

**A** ಉತ್ತರ ಬರೆಯಿರಿ

1. ಪವಿತ್ರ ಕುರ್‌ಆನಿನಲ್ಲಿ ಎಷ್ಟು ಕಡೆಗಳಲ್ಲಿ ನಮಾಝಿನೊಂದಿಗೆ ಝುಕಾತನ್ನು ಪರಾಮರ್ಶಿಸಲಾಗಿದೆ?
2. ಇಸ್ಲಾಮ್ ಝುಕಾತನ್ನು ಕಡ್ಡಾಯಗೊಳಿಸಿರುವುದು ಯಾಕೆ?
3. ಝುಕಾತ್ ಯಾರಿಗೆ ಕಡ್ಡಾಯವಾಗಿದೆ?

**B.** ಅರ್ಥ ಬರೆಯಿರಿ

1. تُؤخَذُ مِنْ أَغْنِيَائِهِمْ وَتُرَدُّ عَلَى فُقَرَائِهِمْ

..................................................................................

2. وَوَيْلٌ لِلْمُشْرِكِينَ الَّذِينَ لَا يُؤْتُونَ الزَّكَاةَ وَهُمْ بِالْآخِرَةِ هُمْ كَافِرُونَ

..................................................................................

ಪಾಠ-2

# ಝಕಾತ್ ಕಡ್ಡಾಯದ ಮೊತ್ತಗಳು

ಝಕಾತ್ ಯಾವುದಕ್ಕೆಲ್ಲ ಕಡ್ಡಾಯಗೊಂಡಿದೆ?

ಸಾಮಾನ್ಯವಾಗಿ ಸೊತ್ತೆಂದು ಪರಿಗಣಿಸಲ್ಪಡುವ ಬಂಗಾರ, ಬೆಳ್ಳಿ, ಕರೆನ್ಸಿ ನೋಟುಗಳು, ಕೃಷಿ ಬೆಳೆಗಳು (ಕೃಷ್ಯುತ್ಪನ್ನಗಳು) ಫಲವಸ್ತುಗಳು, ಜಾನುವಾರು, ಖನಿಜಗಳು, ಠೇವಣಿಗಳು(ನಗದು) ಮತ್ತು ವ್ಯಾಪಾರ, ಕೈಗಾರಿಕೆ, ಕಟ್ಟಡ ಮುಂತಾದವುಗಳಿಂದ ದೊರೆಯುವ ಎಲ್ಲ ರೀತಿಯ ವರಮಾನಗಳಿಗೆ ಇಸ್ಲಾಮ್ ಧರ್ಮವು ಝಕಾತನ್ನು ಕಡ್ಡಾಯಗೊಳಿಸಿದೆ. ಅಲ್ಲಾಹನು ಹೇಳುತ್ತಾನೆ.

يَـاأَيُّهَـاالَّـذِيـنَ آمَـنُـو أَنفِقُوا مِنَ طَيِّبَاتِ مَاكَسَبْتُمْ وَمِمَّا أَخْرَجْنَا لَكُمْ مِنَ الْأَرْضِ (البقره)

"ಸತ್ಯವಿಶ್ವಾಸಿಗಳೇ! ನಿಮ್ಮ ಸಂಪಾದನೆಗಳಿಂದ ಮತ್ತು ಭೂಮಿಯಲ್ಲಿ ನಾವು ನಿಮಗೆ ಉತ್ಪಾದಿಸಿ ಕೊಟ್ಟಿರುವುದರಿಂದ ಉತ್ತಮವಾದುದನ್ನು ನೀವು ಖರ್ಚು ಮಾಡಿರಿ."

وَآتُوا حَقَّهُ يَوْمَ حَصَادِهِ (الأنعام)

"ಬೆಳೆಯುನ್ನು ಕೊಯ್ದಾಗ ಅಲ್ಲಾಹನ ಹಕ್ಕನ್ನು ಸಂದಾಯ ಮಾಡಿರಿ."

(ಅಲ್ ಅನ್ಆಮ್: 141)

### ಬೆಳ್ಳಿ-ಬಂಗಾರಗಳ ನಿಸಾಬ್

20 ಮಿಸ್‌ಕಾಲ್(85 ಗ್ರಾಮ್) ಬಂಗಾರ ಒಬ್ಬನಲ್ಲಿದ್ದರೆ, ಒಂದು ವರ್ಷ ಪೂರ್ತಿಯಾದಾಗ ಅವನಿಗೆ ಝಕಾತ್ ಪಾವತಿ ಕಡ್ಡಾಯವಾಗುವುದು. 20 ಮಿಸ್‌ಕಾಲ್ ಅಂದರೆ ಇಂದಿನ ಗಣನೆಯಂತೆ ಸುಮಾರು 85 ಗ್ರಾಮ್ ಆಗುವುದು. ಇದಕ್ಕೆ ಶೇ. 2½ಯಷ್ಟು ಝಕಾತ್ ಪಾವತಿಸಬೇಕು.

ಅದೇ ರೀತಿ 200 ದಿರ್‌ಹಮ್(ಸುಮಾರು 595 ಗ್ರಾಮ್) ಬೆಳ್ಳಿಯನ್ನು ಒಬ್ಬಾತನು ವಶದಲ್ಲಿರಿಸಿಕೊಂಡಿದ್ದರೆ ಅದಕ್ಕೂ ಶೇ. 2½ಯಷ್ಟು ಝಕಾತ್ ನೀಡಬೇಕು.

ಪ್ರವಾದಿವರ್ಯರು(ಸ) 20 ದಿನಾರ್(ಮಿಸ್‌ಕಾಲ್) ಬಂಗಾರಕ್ಕೂ 200 ದಿರ್‌ಹಮ್ ಬೆಳ್ಳಿಗೂ ಝಕಾತ್ ನಿಗದಿಪಡಿಸಿದ್ದರು. ಈ ತೂಕದ ಆಭರಣಗಳಿಗೂ ಝಕಾತ್ ನೀಡಬೇಕಾಗಿದೆ. ನಿತ್ಯ ಬಳಕೆಯ ಆಭರಣಗಳಿಗೆ ಝಕಾತ್ ನೀಡಬೇಕಾಗಿಲ್ಲ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

## ನಾಣ್ಯ ಮತ್ತು ಕರೆನ್ಸಿಗಳು

ಯಾವುದೇ ನಾಡಿನ ಕರೆನ್ಸಿ ಮತ್ತು ನಾಣ್ಯದ ಮೌಲ್ಯವನ್ನು ಬಂಗಾರದ ಆಧಾರದಲ್ಲಿ ನಿರ್ಣಯಿಸಲಾಗುತ್ತದಷ್ಟೇ? ಆದುದರಿಂದ ಪ್ರತಿಯೊಂದು ನಾಡಿನಲ್ಲಿಯೂ 85 ಗ್ರಾಮ್ ಸ್ವರ್ಣದ ಬೆಲೆಗೆ ಸಮಾನವಾದ ಕರೆನ್ಸಿಗಳನ್ನು ಹೊಂದಿರುವವರು ಝಕಾತ್ ನೀಡಬೇಕು.

## ವ್ಯಾಪಾರ

ವ್ಯಾಪಾರ ಆರಂಭಿಸಿ ಒಂದು ವರ್ಷ ತುಂಬುವಾಗ ವಸ್ತುಗಳ ಲೆಕ್ಕಾಚಾರ ಮಾಡಿ, ಬಂಡವಾಳ ಮತ್ತು ಲಾಭವೂ ಸೇರಿ ಅದು ನಿಸಾಬ್‌ನ ಪ್ರಮಾಣದಷ್ಟಿದ್ದರೆ ಅದಕ್ಕೂ ಶೇ. 2½ ಝಕಾತ್ ನೀಡಬೇಕು. ಸಾಲವಿದ್ದರೆ ಅದರ ಮೊತ್ತವನ್ನು ತೆಗೆದಿರಿಸಿ ಉಳಿದದ್ದು ನಿಸಾಬ್‌ನ (ಪ್ರಮಾಣದ) ಮೊತ್ತದಷ್ಟಾಗುವುದಾದರೆ ಝಕಾತ್ ನೀಡಬೇಕು. ನಿಕ್ಷೇಪಗಳು, (ಬಂಗಾರ, ಬೆಳ್ಳಿ, ಕಬ್ಬಿಣ ಮುಂತಾದ) ಯಾವುದಾದರೂ ಖನಿಜಗಳಿಗೆ ಶೇ. 20ರಷ್ಟು ಝಕಾತ್ ನೀಡಬೇಕಾಗಿದೆ.

## ಕೃಷ್ಯುತ್ಪನ್ನಗಳು

ಧಾನ್ಯಗಳು, ಹಣ್ಣು ಹಂಪಲುಗಳು, ತರಕಾರಿ ಎಂಬಿವುಗಳ ಝಕಾತ್ ಕೊಯ್ಲಿನ ಸಂದರ್ಭದಲ್ಲಿಯೇ ಕೊಡಬೇಕು. ಅವುಗಳ ವರ್ಷ ತುಂಬುವುದಕ್ಕೆ ಕಾದು ಕುಳಿತುಕೊಳ್ಳಬೇಕಾಗಿಲ್ಲ. ಇವುಗಳ ಝಕಾತ್‌ನ ನಿಸಾಬ್ (ಪ್ರಮಾಣ) 5 ವಸ್ಕ್ ಆಗಿದೆ. ಇಂದಿನ ತೂಕದಂತೆ ಸುಮಾರು 650 ಕಿಲೋಗ್ರಾಮ್ ಆಗುವುದು.

ನೀರು, ಗೊಬ್ಬರ ಮುಂತಾದ ಖರ್ಚು ವೆಚ್ಚ ಇಲ್ಲದ ಕೃಷಿಯಾದರೆ ಅದಕ್ಕೆ ಹತ್ತು ಶೇಕಡಾ, ಖರ್ಚು ವೆಚ್ಚಗಳಿರುವ ಕೃಷಿಯಾದರೆ 5 ಶೇಕಡಾ ಝಕಾತ್ ನೀಡಬೇಕು. ಕೃಷಿ ಬೆಳೆಗಳಲ್ಲೂ ಅದನ್ನೇ ಝಕಾತ್ ನೀಡಬೇಕಾಗಿದೆ. ಆರಂಭದಲ್ಲಿ ಉದ್ಧರಿಸಲಾದ ಕುರ್‌ಆನ್ ವಚನವೇ ಬೆಳೆ ಕೊಯ್ಲಿನ ಸಂದರ್ಭದಲ್ಲಿ ಝಕಾತ್ ನೀಡಬೇಕೆಂಬುದನ್ನು ಸ್ಪಷ್ಟಪಡಿಸಿದೆಯಷ್ಟೇ!

## ಜಾನುವಾರುಗಳು

ಸಾಕು ಪ್ರಾಣಿಗಳ ಪ್ರತಿಯೊಂದು ಜಾತಿಗಳಿಗೆ ಬೇರೆ ರೀತಿಯ ನಿಸಾಬ್ ನಿಗದಿಪಡಿಸಲಾಗಿದೆ. ಅವುಗಳಲ್ಲಿ ಪ್ರತಿಯೊಂದಕ್ಕೂ ಝಕಾತ್‌ನ ಮೊತ್ತವನ್ನು ಬೇರೆ ಬೇರೆಯಾಗಿ ನಿರ್ಣಯಿಸಲಾಗಿದೆ (ಎಮ್ಮೆ, ದನ, ಕೋಣ, ಹೋರಿ) 30 ಸಂಖ್ಯೆಗೆ ಒಂದು ವರ್ಷ ಪ್ರಾಯದ ಒಂದು ದನದ ಕರು/ಎಮ್ಮೆ ಮರಿ ಝಕಾತ್ ಆಗಿದೆ. ಆಡುಗಳಲ್ಲಿ

40 ಆಡಿಗೆ ಒಂದು ಆಡನ್ನು ಝಕಾತ್ ನೀಡಬೇಕಾಗಿದೆ. ವಿವರಿಸಲಾದ ಜಾನುವಾರುಗಳು ಮೇಯಲು ಸಮರ್ಥವಾಗಿದ್ದು ಸ್ವಾಧೀನದಲ್ಲಿದ್ದು ಒಂದು ವರ್ಷ ತುಂಬಿರಬೇಕು. ಇವು ಝಕಾತ್ ಕಡ್ಡಾಯಗೊಳ್ಳುವುದರ ನಿಬಂಧನೆಗಳಾಗಿವೆ. ವ್ಯಾಪಾರಕ್ಕಾಗಿ ಖರೀದಿಸುವ ಮತ್ತು ಸಾಕುವ ಪ್ರಾಣಿಗಳು ಈ ನಿಬಂಧನೆಗೆ ಅನ್ವಯವಾಗುವುದಿಲ್ಲ. ಅದಕ್ಕೆ ವ್ಯಾಪಾರದ ಝಕಾತನ್ನು ಈಡುಗೊಳಿಸಬೇಕಾಗಿದೆ. ಜಾನುವಾರುಗಳು ಇಲ್ಲಿ ವಿವರಿಸಲಾದ ಪ್ರಮಾಣಕ್ಕಿಂತ ಹೆಚ್ಚು ಸಂಖ್ಯೆಯಲ್ಲಿರುವುದಾದರೆ ಝಕಾತ್‌ನ ಮೊತ್ತ ಕೂಡಾ ವ್ಯತ್ಯಾಸವಾಗುತ್ತದೆ. ಆ ಕುರಿತು ನಂತರ ಕಲಿಯಬಹುದು.

### ನಾವೇನು ಕಲಿತೆವು?

1. ಸೊತ್ತಿನ ಪ್ರತಿಯೊಂದು ವರ್ಗಕ್ಕೂ ಬೇರೆ ಬೇರೆ ನಿಸಾಬ್‌ಗಳಿವೆ.
2. ಸಾಮಾನ್ಯವಾಗಿ ಹಣವು ಒಂದು ವರ್ಷ ಬಳಿಯಿದ್ದರೆ ಮಾತ್ರ ಝಕಾತ್ ಕಡ್ಡಾಯವಾಗುವುದು.
3. ಕೃಷ್ಯುತ್ಪನ್ನದ ಕೊಯ್ಲಿನ ವೇಳೆ 'ನಿಸಾಬ್' ತುಂಬುವುದಾದರೆ ಝಕಾತ್ ನೀಡಬೇಕು.
4. ನೀರು, ಗೊಬ್ಬರ ಖರ್ಚಿರುವ ಕೃಷಿಗೆ ಶೇ. 5ರ ಪ್ರಮಾಣದಲ್ಲಿ ಮತ್ತು ಆ ಖರ್ಚುವೆಚ್ಚಗಳಿಲ್ಲದ ಕೃಷಿಗೆ ಶೇ. 10ರಷ್ಟು ಝಕಾತ್ ನೀಡಬೇಕಾಗಿದೆ.

### ಅಭ್ಯಾಸ

**A** ಉತ್ತರ ಬರೆಯಿರಿ

1. ಬಂಗಾರದ ನಿಸಾಬೆಷ್ಟು? ಝಕಾತ್‌ನ ಪ್ರಮಾಣವೆಷ್ಟು?
2. ವ್ಯಾಪಾರದ ಝಕಾತನ್ನು ಯಾವ ರೀತಿ ನಿಷ್ಕರ್ಷಿಸಬೇಕು?
3. ಕೃಷ್ಯುತ್ಪನ್ನದಲ್ಲಿ ವರ್ಷ ತುಂಬಬೇಕೆಂದಿಲ್ಲ ಎಂಬುದಕ್ಕೆ ಏನು ಪುರಾವೆಯಿದೆ?
4. ಆಭರಣಗಳಿಗೆ ಝಕಾತ್ ನೀಡಬೇಕಾಗಿದೆಯೇ?
5. ಖನಿಜಗಳಿಗೆ ಝಕಾತ್‌ನ ಪ್ರಮಾಣ ಎಷ್ಟು ಶೇಕಡಾ?

**B** ಭರ್ತಿ ಮಾಡಿರಿ

1. ................................. أَنْفِقُوا مِنْ طَيِّبَاتِ
2. وَآتُوا ......................... حَصَادِهِ
3. ಪ್ರತಿಯೊಂದು ವರ್ಗದ ಸಂಪತ್ತಿನಲ್ಲಿ ಝಕಾತ್‌ನ ಪರಿಮಿತಿಗೆ ..................... ಎಂದು ಹೇಳಲಾಗುವುದು.
4. ವ್ಯಾಪಾರದ ಝಕಾತ್ ಶೇ. ..........ಆಗಿದೆ.
5. ..................... ವೇಳೆಯೇ ಕೃಷ್ಯುತ್ಪನ್ನಗಳ ಝಕಾತ್ ನೀಡಬೇಕು.

## ಪಾಠ-3

# ಝಕಾತ್‌ಗೆ ಅರ್ಹ ವಿಭಾಗಗಳು

## مَصَارِفُ الزَّكَاةِ

ಸಮಾಜದಲ್ಲಿ ಬಡತನ ಮತ್ತು ಕಷ್ಟ ಅನುಭವಿಸುವವರ ಸಂಕಟವನ್ನು ಪರಿಹರಿಸಲು ಮತ್ತು ಅವರನ್ನು ಆರ್ಥಿಕವಾಗಿ ಮೇಲೆತ್ತುವುದಕ್ಕಾಗಿ ಝಕಾತನ್ನು ಕಡ್ಡಾಯಗೊಳಿಸಲಾಗಿದೆ ಎಂದು ಕಲಿತವಷ್ಟೇ! ಎಂಟು ವಿಭಾಗಗಳಿಗೆ ಝಕಾತನ್ನು ಬಳಸಬೇಕಾಗಿದೆ. ಅಲ್ಲಾಹನು ಹೇಳುತ್ತಾನೆ;

إِنَّمَا الصَّدَقَاتُ لِلْفُقَرَاءِ وَالْمَسَاكِينَ وَالْعَامِلِينَ عَلَيْهَا وَالْمُؤَلَّفَةِ قُلُوبُهُمْ وَفِي الرِّقَابِ وَالْغَارِمِينَ وَفِي سَبِيلِ اللَّهِ وَابْنِ السَّبِيلِ فَرِيضَةً مِنَ اللَّهِ وَاللَّهُ عَلِيمٌ حَكِيمٌ (التوبة)

"ವಾಸ್ತವದಲ್ಲಿ ಈ ಕಡ್ಡಾಯ ದಾನಗಳು(ಫಕೀರ) ಬಡವರಿಗೆ, (ಮಿಸ್ಕೀನ್) ದರಿದ್ರರಿಗೆ ಕಡ್ಡಾಯ ದಾನಗಳ ಕಾರ್ಯದಲ್ಲಿ ನೇಮಕಗೊಂಡವರಿಗೆ, ಮನವೊಲಿಸಬೇಕಾದ ಅಗತ್ಯವಿರುವವರಿಗೆ, ಕೊರಳು ಬಿಡಿಸುವುದಕ್ಕೆ, ಸಾಲಗಾರರಿಗೆ ನೆರವು ನೀಡಲಿಕ್ಕೆ, ಅಲ್ಲಾಹನ ಮಾರ್ಗದಲ್ಲಿ ಮತ್ತು ಪ್ರಯಾಣಿಕರ ಆದರಕ್ಕಾಗಿ ಖರ್ಚು ಮಾಡಲಿಕ್ಕಾಗಿರುತ್ತದೆ. ಅಲ್ಲಾಹನ ಕಡೆಯ ಒಂದು ಕಡ್ಡಾಯವಿದು. ಅಲ್ಲಾಹನು ಸರ್ವಜ್ಞನೂ ಮಹಾಧೀಮಂತನೂ ಆಗಿರುತ್ತಾನೆ."

ಇದರಲ್ಲಿ ಪ್ರತಿಯೊಂದು ವಿಭಾಗವನ್ನೂ ಬೇರೆ ಬೇರೆ ಪರಿಶೀಲಿಸೋಣ:

**1.** ಬಡವ(ಫಕೀರ): ತೀರಾ ವರಮಾನವಿಲ್ಲದವರು, ಇರುವ ವರಮಾನದಿಂದ ತಾನು ಮತ್ತು ತನ್ನ ಕುಟುಂಬದ ಜೀವನಾವಶ್ಯಕತೆಗಳಿಗೆ ಸಾಲದವರು ಫಕೀರರಾಗಿದ್ದಾರೆ.

**2.** ನಿರ್ಗತಿಕರು(ಮಿಸ್ಕೀನ್): ವರಮಾನವಿದ್ದರೂ ತಮ್ಮ ಅವಶ್ಯಕತೆಗಳನ್ನು ಪೂರೈಸಲಾಗದವರು ಮತ್ತು ತಮ್ಮ ಕಷ್ಟವನ್ನು ಬೇರೆಯವರಿಗೆ ತಿಳಿಸದೆ ಸ್ವಾಭಿಮಾನದಿಂದ ಬದುಕುವವರನ್ನು 'ಮಿಸ್ಕೀನ್' ಎಂದು ಕರೆಯಲಾಗುತ್ತದೆ. "ಅವರ ಬಗ್ಗೆ ತಿಳಿಯದವರು

ಅವರನ್ನು ನೋಡುವಾಗ ಧನಿಕರೆಂದು ಭಾವಿಸುತ್ತಾರೆ" ಎಂದು ಪವಿತ್ರ ಕುರ್‌ಆನ್ ವಿಶ್ಲೇಷಿಸಿದೆ.

**3.** ಝಕಾತ್‌ನ ಕೆಲಸಗಾರರು; ಧನಿಕರಿಂದ ಝಕಾತ್‌ನ ಸೊತ್ತುಗಳನ್ನು ಶೇಖರಿಸುವುದು, ಅದನ್ನು ಸಂರಕ್ಷಿಸುವುದು, ಅರ್ಹರಾದ ವಿಭಾಗಗಳಿಗೆ ವಿತರಿಸುವುದರಿಂದ ಹಿಡಿದು ಝಕಾತ್ ಸಂಗ್ರಹ ಮತ್ತು ವಿತರಣೆಯಂತಹ ಅನೇಕ ಕೆಲಸದಲ್ಲಿ ಪ್ರವೃತ್ತರಾದವರು ಮೂರನೇ ವಿಭಾಗವಾಗಿದ್ದಾರೆ. ಇವರು ಧನಿಕರಾಗಿದ್ದರೂ ಇವರಿಗೆ ಝಕಾತ್‌ನ ಪಾಲನ್ನು ನೀಡಬಹುದಾಗಿದೆ.

**4.** ಮನವೊಲಿಸಬೇಕಾದವರು; ವಿಶ್ವಾಸಿಗಳನ್ನು ಧರ್ಮದಲ್ಲಿ ನೆಲೆಯೂರಿಸುವುದು, ಇಸ್ಲಾಮ್ ಮತ್ತು ಮುಸ್ಲಿಮರ ವಿರುದ್ಧ ಹಗೆತನವಿಟ್ಟುಕೊಂಡವರ ಉಪಟಳವನ್ನು ತಡೆಯುವುದು. ಇಸ್ಲಾಮ್ ಮತ್ತು ಮುಸ್ಲಿಮರಿಗಾಗಿರುವ ಪ್ರತಿರೋಧ ಚಟುವಟಿಕೆಗಳಲ್ಲಿ ಅವರನ್ನು ಸಹಕರಿಸುವಂತೆ ಮಾಡುವುದು ಮುಂತಾದ ಆವಶ್ಯಕತೆಗಳಿಗೆ ಝಕಾತ್ ನೀಡುವುದು ಈ ವಿಭಾಗದಲ್ಲಿ ಬರುತ್ತದೆ.

**5.** ದಾಸ್ಯ ವಿಮೋಚನೆ: ಹಿಂದಿನ ಕಾಲದಲ್ಲಿದ್ದ ಗುಲಾಮ ಸಂಪ್ರದಾಯವನ್ನು ನೀವು ಅರಿತಿರುವಿರಷ್ಟೇ! ಇಸ್ಲಾಮ್ ಗುಲಾಮಿ ಸಂಪ್ರದಾಯವನ್ನು ಇಷ್ಟಪಡುವುದಿಲ್ಲ. ಯಜಮಾನರಲ್ಲಿ ಬಿಡುಗಡೆಯ ಕರಾರನ್ನು ಬರೆಸಿಕೊಂಡವರ ವಿಮೋಚನಾ ಮೊತ್ತವನ್ನು ನೀಡುವುದಕ್ಕೂ ಗುಲಾಮರನ್ನು ಖರೀದಿಸಿ ಬಿಡುಗಡೆಗೊಳಿಸುವುದಕ್ಕೂ ಝಕಾತ್ ನೀಡಬಹುದು. ಇದು ಝಕಾತ್ ವಿನಿಯೋಗಿಸುವ ಐದನೆ ವಿಭಾಗವಾಗಿದೆ.

**6.** ಸಾಲ ಪೀಡಿತರು: ಸ್ವತಃ ಸಾಲದಲ್ಲಿ ಬಿದ್ದವರು, ಇತರರ ಸಾಲವನ್ನು ವಹಿಸಿಕೊಂಡು ಸ್ವಯಂ ಸಾಲದಲ್ಲಿ ಸಿಲುಕಿದವರು. ಅವರ ಬಳಿ ಸಾಲ ಮರುಪಾವತಿ ಮಾಡಲು ಯಾವುದೇ ಮಾರ್ಗವಿಲ್ಲದ ಪಕ್ಷದಲ್ಲಿ ಅಂತವರಿಗೆ ಝಕಾತ್‌ನಿಂದ ಒಂದು ಪಾಲನ್ನು ನೀಡಬಹುದು.

**7.** ದೇವ ಮಾರ್ಗದಲ್ಲಿ: ಇಲ್ಲಿ ಅಲ್ಲಾಹನ ಧರ್ಮದ ಪ್ರಚಾರ, ಸಂಸ್ಥಾಪನೆಗಾಗಿ ನಡೆಸುವ ಎಲ್ಲ ರೀತಿಯ ತ್ಯಾಗ ಪರಿಶ್ರಮಗಳನ್ನು ಉದ್ದೇಶಿಸಲಾಗಿದೆ. ಧರ್ಮದ ಜ್ಞಾನ (ಶಿಕ್ಷಣ) ನೀಡುವ, ಸಂದೇಶ ಪ್ರಚಾರಕರನ್ನು ರೂಪಿಸುವ ಸಂಸ್ಥೆಗಳಿಂದ ಹಿಡಿದು ಅಲ್ಲಾಹನ ಧರ್ಮದ ಮತ್ತು ಮುಸ್ಲಿಮ್ ಸಮುದಾಯದ ಅಸ್ತಿತ್ವದ ಹೋರಾಟಗಳ ವರೆಗೂ ಇದರಲ್ಲಿ ಸೇರುತ್ತದೆ.

**8.** ಪ್ರಯಾಣಿಕರು; ಪ್ರಯಾಣಿಕರು ಹಲವು ರೀತಿಯ ಸಂಕಷ್ಟಗಳಿಗೆ ತುತ್ತಾಗುತ್ತಾರೆ. ಊರಿಗೆ ತಲುಪುವುದಕ್ಕಿಂತ ಮುಂಚೆ ಕೈಯಲ್ಲಿದ್ದ ಹಣ ಮುಗಿದು ಬಿಡುವುದು, ದೋಚಲ್ಪಡುವುದು, ಅವಘಡಗಳಿಗೆ ತುತ್ತಾಗುವುದು ಮುಂತಾದ ಸಂಕಷ್ಟಗಳನ್ನು ಎದುರಿಸಿದವರ ಸಮಸ್ಯೆ ಪರಿಹಾರಕ್ಕಾಗಿ ಝಕಾತ್‌ನಿಂದ ನೀಡಬಹುದು. ಪ್ರಕೃತಿ ವಿಕೋಪ ಮುಂತಾದ ವಿಪತ್ತುಗಳಿಗೆ ತುತ್ತಾಗಿ ಊರು, ಮನೆ ಮಾರು ತೊರೆಯಬೇಕಾಗಿ ಬಂದ ನಿರಾಶ್ರಿತರೂ ಈ ವಿಭಾಗಕ್ಕೆ ಸೇರಿದ್ದಾರೆ.

ಸಮಾಜದಲ್ಲಿರುವ ಎಲ್ಲ ಅಸಹಾಯಕ ಜನರು ಈ ಎಂಟು ವಿಭಾಗಗಳಲ್ಲಿ ಯಾವುದಾದರೊಂದು ವಿಭಾಗಕ್ಕೆ ಸೇರಿರುವುದನ್ನು ಗಮನಿಸಬಹುದಾಗಿದೆ.

## ವಿತರಿಸುವುದು ಹೇಗೆ?

ಧನಿಕರಿಂದ ಝಕಾತನ್ನು ಸಂಗ್ರಹಿಸಿ ಅದನ್ನು ಪ್ರಯೋಜನವಾಗುವ ಮತ್ತು ವ್ಯವಸ್ಥಿತವಾದ ರೀತಿಯಿಂದ ಅರ್ಹವಾದ ವಿಭಾಗಗಳಿಗೆ ವಿತರಿಸುವುದು ಇಸ್ಲಾಮಿ ಆಡಳಿತ ಕೂಟದ ಹೊಣೆಯಾಗಿದೆ. ಸ್ವಪ್ರೇರಣೆಯಿಂದ ಝಕಾತ್ ನೀಡದವರಿಂದ ಅದನ್ನು ವಸೂಲು ಮಾಡಿ ಸಮಾಜದ ಹಸಿವು ದಾರಿದ್ರ್ಯಗಳನ್ನು ದೂರೀಕರಿಸಲು ಸರಕಾರ ಏರ್ಪಾಡು ನಡೆಸಬೇಕು. ಹೆಸರಿಗೆ ಏನಾದರೂ ನೀಡದೆ ಪ್ರತಿಯೊಂದೂ ವಿಭಾಗದ ಆವಶ್ಯಕತೆಗಳು ಪೂರ್ತಿಯಾಗುವಂತೆ ಮೊತ್ತವನ್ನು ನೀಡಬೇಕು. ಆಡಳಿತ ಕೂಟವಿಲ್ಲದಿರುವಾಗ ಪ್ರತಿಯೊಂದು ನಾಡಿನ ಮಸೀದಿಯ ಮೊಹಲ್ಲಾಗಳನ್ನು ಕೇಂದ್ರವಾಗಿಟ್ಟು ಸಾಮೂಹಿಕವಾಗಿ ನಿರ್ವಹಣೆ ನಡೆಸಿದರೆ ಒಂದು ಹಂತದವರೆಗೆ ಫಲಪ್ರದವಾಗಲು ಸಾಧ್ಯವಿದೆ. ಹೀಗಲ್ಲದೆ ಸಾಮಾನ್ಯವಾಗಿ ನಮ್ಮ ನಾಡಿನಲ್ಲಿ ಕಾಣುವಂತೆ ವ್ಯಕ್ತಿಗಳು ಏನಾದರೂ ಚಿಲ್ಲರೆ ಹಣವನ್ನು (ಪುಡಿಕಾಸನ್ನು) ಝಕಾತೆಂಬ ಹೆಸರಿನಲ್ಲಿ ಅನೇಕರಿಗೆ ನೀಡುವುದರಿಂದ ಉದ್ದೇಶಿತ 'ಗುರಿ' ಸಾಧಿಸಲು ಸಾಧ್ಯವಿಲ್ಲ.

### ನಾವೇನು ಕಲಿತೆವು?

1. ಝಕಾತನ್ನು ಎಂಟು ವಿಭಾಗದ ಜನರಿಗೆ ನೀಡಬೇಕಾಗಿದೆ.
2. ಆವಶ್ಯಕತೆಗಳು ಈಡೇರುವ ರೀತಿಯಲ್ಲಿ ಮೊತ್ತವನ್ನು ನೀಡಬೇಕಾಗಿದೆ.
3. ಸಂಘಟಿತ ರೀತಿಯಿಂದ ಝಕಾತ್ ವಿತರಣೆಗೆ ಏರ್ಪಾಡು ನಡೆಸಬೇಕಾಗಿದೆ.

### ಅಭ್ಯಾಸ

1. ಝಕಾತ್ ನೀಡಬೇಕಾದ 8 ವಿಭಾಗಗಳು ಯಾವುವು?
2. ಆ ವಿಷಯದಲ್ಲಿ ಕುರ್‌ಆನ್ ಏನೆಂದು ಹೇಳಿದೆ?
3. ಝಕಾತ್ ವೈಯಕ್ತಿಕ ಮತ್ತು ಸಾಮೂಹಿಕವಾಗಿ ನೀಡುವುದರ ವ್ಯತ್ಯಾಸವೇನು?

ಪಾಠ-4

# ಫಿತ್ರ್ ಝಕಾತ್

# زَكَاةُ الْفِطْر

ರಮಝಾನ್ ಉಪವಾಸ ವ್ರತದಿಂದ ವಿರಮಿಸಿದ ನಂತರ ಕಡ್ಡಾಯಗೊಳ್ಳುವ ದಾನ ಫಿತ್ರ್ ಝಕಾತ್ ಆಗಿದೆ. ಮಹಿಳೆಯೋ, ಪುರುಷನೋ, ದೊಡ್ಡವನೋ, ಚಿಕ್ಕವನೋ, ಗುಲಾಮನೋ, ಸ್ವತಂತ್ರನೋ ಯಾರೇ ಆದರೂ ಮುಸ್ಲಿಮರಾಗಿದ್ದರೆ ಪ್ರತಿಯೋರ್ವ ವ್ಯಕ್ತಿಯ ಹೆಸರಿನಲ್ಲಿ ಈ ಝಕಾತ್ ಕಡ್ಡಾಯವಾಗಿದೆ. ಇಬ್ನು ಉಮರ್(ರ) ಹೇಳಿರುವ ಬುಖಾರಿ ಮತ್ತು ಮುಸ್ಲಿಮ್ ಉಲ್ಲೇಖಿಸಿರುವ ಪ್ರವಾದಿ ವಚನ ಇದಕ್ಕೆ ಆಧಾರವಾಗಿದೆ.

"ರಮಝಾನ್ ವ್ರತದ ಕೊನೆಯ ಝಕಾತಾಗಿ ಮುಸ್ಲಿಮರಾದ ಗುಲಾಮ, ಸ್ವತಂತ್ರ ಸ್ತ್ರೀ-ಪುರುಷ ಚಿಕ್ಕವನು, ದೊಡ್ಡವನಿಗಾಗಿ ಒಂದು ಸ್ವಾಲ್ ಉತ್ತುತ್ತೆ(ಖರ್ಜೂರ) ಅಥವಾ ಒಂದು ಸ್ವಾಲ್ ಬಾರ್ಲಿ ರವೆ ಗೋಧಿ ನೀಡಬೇಕೆಂದು ದೇವ ಸಂದೇಶವಾಹಕರು ಕಡ್ಡಾಯಗೊಳಿಸಿದ್ದಾರೆ."

**ಯಾರಿಗೆ ಕಡ್ಡಾಯ;** ತನಗೂ, ತನ್ನ ಕುಟುಂಬಕ್ಕೂ ಈದ್‌ನ ಹಗಲು ರಾತ್ರಿಯ ಆಹಾರದ ಆವಶ್ಯಕತೆಯು ಪೂರ್ತಿಯಾಗಿ ಒಂದು ಸ್ವಾಲ್ ಆಹಾರ ವಸ್ತು ಕೈ ವಶದಲ್ಲಿರುವ ಸ್ವತಂತ್ರರಾದ ಎಲ್ಲ ಮುಸ್ಲಿಮರಿಗೂ 'ಫಿತ್ರ್ ಝಕಾತ್' ಕಡ್ಡಾಯವಾಗಿದೆ. ಅವರು ಸ್ವಶರೀರಕ್ಕಾಗಿ ಮತ್ತು ತಾವು ಖರ್ಚು ನೀಡಬೇಕಾಗಿರುವ ಪತ್ನಿ ಮಕ್ಕಳಿಗಾಗಿಯೂ ಹಾಗೂ ಅವರು ಸಂರಕ್ಷಣೆಯ ಹೊಣೆ ವಹಿಸಿ ಖರ್ಚನ್ನು ಭರಿಸುವ ಸೇವಕರಿಗಾಗಿಯೂ ಈ ಝಕಾತ್ ನೀಡಬೇಕು.

**ಅಳತೆ(ಪ್ರಮಾಣ):** ಗೋಧಿ, ಬಾರ್ಲಿ, ಖರ್ಜೂರ, ದ್ರಾಕ್ಷೆ, ಕೆನೆ, ಅಕ್ಕಿ, ಜೋಳ ಮುಂತಾದ ಮುಖ್ಯ ಆಹಾರವಾಗಿ ಉಪಯೋಗಿಸುವ ವಸ್ತುಗಳಿಂದ ಒಂದು ಸ್ವಾಲ್(2,200 ಗ್ರಾಮ್) ಫಿತ್ರ್ ಝಕಾತ್ ನೀಡಬೇಕು. ಅಬೂ ಸಈದಿಲ್ ಕುದ್ರಿ(ರ) ಹೇಳಿದ್ದಾರೆ; "ಪ್ರವಾದಿವರ್ಯರು(ಸ) ನಮ್ಮೊಂದಿಗಿದ್ದ ಕಾಲದಲ್ಲಿ ಚಿಕ್ಕವನು, ದೊಡ್ಡವನು, ಗುಲಾಮ-ಸ್ವತಂತ್ರರಿಗೂ ನಾವು ಗೋಧಿ, ಬಾರ್ಲಿ, ಕೆನೆ, ಖರ್ಜೂರ, ದ್ರಾಕ್ಷೆ ಇತ್ಯಾದಿಗಳಲ್ಲಿ ಯಾವುದನ್ನಾದರೂ 'ಫಿತ್ರ್ ಝಕಾತ್' ಆಗಿ ನೀಡುತ್ತಿದ್ದೆವು."

ಯಾವಾಗ ಕಡ್ಡಾಯ: ರಮಝಾನ್ ಕೊನೆಯಾಗಿರುವಾಗ 'ಫಿತ್ರ್ ಝಕಾತ್' ಕಡ್ಡಾಯವಾಗುತ್ತದೆಂಬ ವಿಚಾರದಲ್ಲಿ ವಿದ್ವಾಂಸರ ನಡುವೆ ಒಮ್ಮತವಿದೆ. ಈದುಲ್ ಫಿತ್ರ್(ಹಬ್ಬ)ಗಿಂತ ಒಂದೆರಡು ದಿವಸ ಮೊದಲೇ ಝಕಾತ್ ನೀಡಿದರೂ ಸಿಂಧುವಾಗುತ್ತದೆ ಎಂಬ ಕರ್ಮಶಾಸ್ತ್ರ ವಿದ್ವಾಂಸರಲ್ಲಿ ಹೆಚ್ಚಿನವರ ಅಭಿಪ್ರಾಯವಾಗಿದೆ. ಇಬ್ನು ಉಮರ್(ರ) ಹೇಳುತ್ತಾರೆ, "ಜನರು ನಮಾಝಿಗೆ ಹೊರಡುವುದಕ್ಕಿಂತ ಮುಂಚೆ ಫಿತ್ರ್ ಝಕಾತ್ ನೀಡಲು ಪ್ರವಾದಿಯವರು(ಸ) ನಮಗೆ ಆದೇಶಿಸಿದರು."

"ಈದುಲ್ ಫಿತ್ರ್ ನಮಾಝ್‌ಗಿಂತ ಮೊದಲು ಯಾರಾದರೂ ಅದನ್ನು ನೀಡಿದರೆ ಅದು ಸ್ವೀಕಾರಾರ್ಹವಾದ ಝಕಾತಾಗಿದೆ. ನಂತರ ನೀಡುವುದಾದರೆ ಇತರ ದಾನಗಳಂತೆ ಒಂದು ದಾನ ಮಾತ್ರವಾಗುವುದು" ಎಂದು ಪ್ರವಾದಿವರ್ಯರು(ಸ) ಹೇಳಿದ್ದಾರೆ.

ವಿತರಣೆ: ಝಕಾತನ್ನು ವಿತರಿಸಲ್ಪಡುವವರಿಗೇ ಫಿತ್ರ್ ಝಕಾತನ್ನು ಕೂಡಾ ವಿತರಿಸಬೇಕಾಗಿದೆ. ಅಂದರೆ إِنَّمَا الصَّدَقَاتُ لِلْفُقَرَاءِ ಎಂದು ಆರಂಭವಾಗುವ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿರುವ ಎಂಟು ವಿಭಾಗಗಳಿಗೆ ಅದನ್ನು ವಿತರಿಸಬೇಕೆಂದು ಅರ್ಥವಾಗಿದೆ. ಆದರೆ ಇವರಲ್ಲಿ ಬಡವರೇ ಹೆಚ್ಚು ಪರಿಗಣಿಸಬೇಕಾದ ವಿಭಾಗವಾಗಿದ್ದಾರೆ.

"ಉಪವಾಸಿಗರ ಶುದ್ಧೀಕರಣವಾಗಿಯೂ ಬಡವರ ಆಹಾರವಾಗಿಯೂ ಪ್ರವಾದಿವರ್ಯರು(ಸ) ಫಿತ್ರ್ ಝಕಾತನ್ನು ಕಡ್ಡಾಯಗೊಳಿಸಿದ್ದಾರೆ" ಎಂಬ ಹದೀಸ್(ಪ್ರವಾದಿ ವಚನ) ಆಧಾರವಾಗಿದೆ. ಅದಲ್ಲದೆ ಇಬ್ನು ಉಮರ್, ಬೈಹಕಿ, ದಾರುಕುತ್ನಿ ಹೇಳಿರುವ ಹದೀಸ್ ಇದಕ್ಕೆ ಆಧಾರವಾಗಿದೆ ಅವರು ಹೇಳುತ್ತಾರೆ.

"ಪ್ರವಾದಿವರ್ಯರು(ಸ) ಫಿತ್ರ್ ಝಕಾತ್ ಕಡ್ಡಾಯಗೊಳಿಸಿ ಹೀಗೆ ಹೇಳಿದರು: أَغْنُوهُمْ فِي هَذَا الْيَوْمِ (ಈ ದಿನ ಅವರು ಪರಾಶ್ರಿತರಾಗದಂತೆ ಮಾಡಿರಿ)

ಅಭ್ಯಾಸ

1. ಫಿತ್ರ್ ಝಕಾತ್ ಯಾರಿಗೆ ಕಡ್ಡಾಯವಾಗಿದೆ?
2. ಫಿತ್ರ್ ಝಕಾತ್ ಎಷ್ಟು ಪ್ರಮಾಣದಲ್ಲಿ ನೀಡಬೇಕಾಗಿದೆ?
3. ಫಿತ್ರ್ ಝಕಾತ್ ಯಾವಾಗ ಕಡ್ಡಾಯವಾಗುತ್ತದೆ?

## ಪಾಠ-5

# ಉಪವಾಸ

# اَلصَّوْم

ಇಸ್ಲಾಮಿನ ಪಂಚ ಸ್ತಂಭಗಳಲ್ಲಿ ಉಪವಾಸ ನಾಲ್ಕನೆಯದ್ದಾಗಿದೆ. بُنِيَ الْإِسْلَامُ عَلَى خَمْسٍ ಎಂಬ ಹದೀಸ್‌ನಲ್ಲಿ ನೀವು ಅದನ್ನು ಕಲಿತಿರುವಿರಷ್ಟೇ! ರಮಝಾನ್ ಪೂರ್ತಿ ತಿಂಗಳು ಉಪವಾಸ ಅನುಷ್ಠಾನಿಸುವುದು ಮುಸ್ಲಿಮರಿಗೆ ಕಡ್ಡಾಯವಾಗಿದೆ. ಮಾನವಕುಲದ ಮಾರ್ಗದರ್ಶನಕ್ಕಾಗಿ ಅಲ್ಲಾಹನು ಪವಿತ್ರ ಕುರ್‌ಆನನ್ನು ಅವತೀರ್ಣಗೊಳಿಸಿರುವ ತಿಂಗಳದು. ಆ ಮಹತ್ತರವಾದ ಅನುಗ್ರಹಕ್ಕೆ ಸೂಕ್ತವಾದ ರೂಪದಲ್ಲಿ ನಾವು ಅಲ್ಲಾಹನಿಗೆ ಕೃತಜ್ಞತೆ ಅರ್ಪಿಸಬೇಕಾಗಿದೆ. ಅದಕ್ಕಾಗಿ ಅಲ್ಲಾಹನೇ ಸೂಚಿಸಿರುವ ಮಾರ್ಗ ರಮಝಾನ್ ತಿಂಗಳ ಉಪವಾಸವಾಗಿದೆ.

ಅಲ್ಲಾಹನು ಹೇಳುತ್ತಾನೆ:

شَهْرُ رَمَضَانَ الَّذِي أُنْزِلَ فِيهِ الْقُرْآنُ هُدًى لِلنَّاسِ وَبَيِّنَاتٍ مِنَ الْهُدَى وَالْفُرْقَانِ فَمَنْ شَهِدَ مِنْكُمُ الشَّهْرَ فَلْيَصُمْهُ (البقرة)

"ಮಾನವರಿಗೆ ಸಾದ್ಯಂತ ಸನ್ಮಾರ್ಗ, ಮಾರ್ಗದರ್ಶಕ ಮತ್ತು ಸತ್ಯಾಸತ್ಯಗಳಲ್ಲಿರುವ ಅಂತರವನ್ನು ಸುವ್ಯಕ್ತವಾಗಿ ತಿಳಿಸುವ ಶಿಕ್ಷಣಗಳನ್ನೊಳಗೊಂಡಿರುವ 'ಕುರ್‌ಆನ್' ಅವತೀರ್ಣಗೊಂಡ ತಿಂಗಳು 'ರಮಝಾನ್' ಆಗಿರುತ್ತದೆ. ಆದುದರಿಂದ ಯಾವನಾದರೂ ಆ ತಿಂಗಳನ್ನು ಹೊಂದಿದಾಗ ಅವನು ಆ ಸಂಪೂರ್ಣ ತಿಂಗಳ ಉಪವಾಸ ವ್ರತವನ್ನಾಚರಿಸಬೇಕು."

ಪ್ರಭಾತೋದಯದಿಂದ ಹಿಡಿದು ಸೂರ್ಯಾಸ್ತಮಾನದ ವರೆಗೆ ಉದ್ದೇಶಪೂರ್ವಕವಾಗಿ ಆಹಾರ ಪಾನೀಯಗಳನ್ನು ತೊರೆಯುವುದು ಮತ್ತು ಉಪವಾಸವನ್ನು ಕೆಡಿಸುವ ಇತರ ಕಾರ್ಯಗಳಿಂದ ದೂರ ನಿಲ್ಲುವುದು ಉಪವಾಸ ಉದ್ದೇಶವಾಗಿದೆ.

**ಉಪವಾಸಿಗನು ಗಮನಿಸಬೇಕಾದ ವಿಷಯಗಳು:** ಕೆಟ್ಟ ಮಾತು ಕೃತಿಗಳಿಂದ ದೂರವಿರುವುದು. ದೇಹೇಚ್ಛೆಯನ್ನು ನಿಯಂತ್ರಿಸುವುದು ಇತ್ಯಾದಿ ಉಪವಾಸಿಗನು ಗಮನಿಸ ಬೇಕಾದ ವಿಷಯಗಳಾಗಿವೆ. ಪ್ರವಾದಿವರ್ಯರು(ಸ) ಹೇಳುತ್ತಾರೆ:

مَنْ لَمْ يَدَعْ قَوْلَ الزُّورِ وَالْعَمَلَ بِهِ فَلَيْسَ لِلّٰهِ حَاجَةٌ فِى أَنْ يَدَعَ طَعَامَهُ وَشَرَابَهُ (البخاري)

"ಸುಳ್ಳಾಡುವುದನ್ನು ಮತ್ತು ಅದರಂತೆ ವರ್ತಿಸುವುದನ್ನು ಯಾರು ವರ್ಜಿಸುವುದಿಲ್ಲವೋ ಅಂಥವರು ಆಹಾರ ಪಾನೀಯಗಳನ್ನು ತೊರೆಯುವುದು ಅಲ್ಲಾಹನಿಗೆ ಬೇಕಾಗಿಲ್ಲ."

ದುರ್ಭಾವನೆ, ದುರ್ವರ್ತನೆಗಳನ್ನು ತೊರೆಯುವುದರೊಂದಿಗೆ, ಅಲ್ಲಾಹನನ್ನು ಸ್ಮರಿಸುವುದು, ಸ್ತುತಿಸುವುದು, ಸತ್ಕರ್ಮಗಳನ್ನು ಅಧಿಕಗೊಳಿಸುವುದು ಮುಂತಾದವುಗಳ ಮೂಲಕ ಅಲ್ಲಾಹನೊಡನೆ ಹೆಚ್ಚು ನಿಕಟವಾಗಲು ಪ್ರಯತ್ನಿಸಬೇಕಾಗಿದೆ. ಅದಕ್ಕಾಗಿಯೇ ರಮಝಾನ್‌ನ ಸಮಯದಲ್ಲಿ ಪವಿತ್ರ ಕುರ್‌ಆನ್ ಪಾರಾಯಣ ಮತ್ತು ರಾತ್ರಿ ನಮಾಝ್ ದಾನ ಧರ್ಮಗಳು ಮುಂತಾದುವುಗಳನ್ನು ಹೆಚ್ಚಿಸುವುದಾಗಿದೆ.

ಉಪವಾಸವು ಮಾನಸಿಕವಾಗಿ ನಿಯಂತ್ರಣ ಮತ್ತು ಕೆಟ್ಟ ಕಾರ್ಯಗಳನ್ನು ತೊರೆಯುವುದರ ತರಬೇತಿಯಾಗಿದೆ. ಜೀವ ಉಳಿಯುವುದಕ್ಕೆ ಅಗತ್ಯವಿರುವ ಆಹಾರ ಮತ್ತು ನೀರನ್ನು ಕೂಡಾ ಅಲ್ಲಾಹನ ಆದೇಶದ ಪ್ರಕಾರ ಉಪವಾಸ ಹಿಡಿಯುವವನು ತೊರೆಯುತ್ತಾನೆ. ಆ ಮೂಲಕ ಅವನಿಗೆ ಅನವಶ್ಯಕ ಕಾರ್ಯಗಳನ್ನು ವರ್ಜಿಸಲು ಬೇಕಿರುವ ಆತ್ಮಶಕ್ತಿ ದೊರೆಯುತ್ತವೆ. ಈ ರೀತಿ ಆತ್ಮಸಂಸ್ಕರಣೆ ಗಳಿಸುವುದು ಉಪವಾಸದ ಉದ್ದೇಶವಾಗಿದೆ.

**ಚಂದ್ರೋದಯದ ದರ್ಶನ;** ನಂಬಿಗಸ್ಥನಾದ ಒಬ್ಬ ವ್ಯಕ್ತಿಯಾದರೂ ಚಂದ್ರೋದಯವನ್ನು ನೋಡುವುದರಿಂದ ಅಥವಾ ಶಾಬಾನ್ ತಿಂಗಳಿನ ಮೂವತ್ತು ದಿವಸಗಳು ಪೂರ್ತಿಯಾಗುವುದರಿಂದ ರಮಝಾನ್ ತಿಂಗಳು ಆರಂಭವಾಗುತ್ತದೆ ಪ್ರವಾದಿವರ್ಯರು(ಸ) ಹೇಳಿರುವುದು ವರದಿಯಾಗಿದೆ; "ತಿಂಗಳೋದಯ (ಚಂದ್ರದರ್ಶನ) ನೋಡಿದರೆ ಉಪವಾಸ ಹಿಡಿಯಿರಿ. ಅದು ಕಂಡರೆ (ಹೊಸ ತಿಂಗಳಾರಂಭದ ಚಂದ್ರನನ್ನು) ಉಪವಾಸವನ್ನು ಕೊನೆಗೊಳಿಸಿರಿ. ಇನ್ನು ಮೋಡ ಆವರಿಸಿದ್ದರಿಂದ ಅದು (ಚಂದ್ರ) ವ್ಯಕ್ತವಾಗದಿದ್ದರೆ ಶಾಬಾನ್ ತಿಂಗಳ ಸಂಖ್ಯೆ ಮೂವತ್ತು ದಿವಸವನ್ನು ಪೂರ್ಣಗೊಳಿಸಿರಿ" ಯಾವುದಾದರೂ ಒಂದು ಊರಿನಲ್ಲಿ ಚಂದ್ರದರ್ಶನವಾದರೆ ಸಾಕಾಗುತ್ತದೆ. ಎಲ್ಲ ಕಡೆಯೂ ಕಾಣಬೇಕಾಗಿಲ್ಲ.

ಕೆಳಗೆ ಕೊಟ್ಟಿರುವ ಉಪಾಧಿ(شرط)ಗಳು ಪೂರ್ತಿಯಾದವರೆಲ್ಲರಿಗೂ ಉಪವಾಸ ಕಡ್ಡಾಯವಾಗಿದೆ. 1. ಮುಸ್ಲಿಮರಾಗಿರಬೇಕು 2. ಪ್ರಾಯ ಪೂರ್ತಿಯಾಗಿರಬೇಕು 3. ಬುದ್ಧಿ

ಸ್ತಿಮಿತವಿರುವವನಾಗಬೇಕು 4. ಆರೋಗ್ಯವಂತನಾಗಿರಬೇಕು 5. ಪ್ರಯಾಣಿಕ(ಯಾತ್ರಿಕ) ನಾಗಿರಬಾರದು.

## ಉಪವಾಸ ಕಡ್ಡಾಯವಾದ ಎರಡು ಘಟಕಗಳಿವೆ:

**1.** ನಿಯ್ಯತ್(ಸಂಕಲ್ಪ); ರಮಝಾನ್‌ನ ಪ್ರತಿಯೊಂದು ರಾತ್ರಿಯಲ್ಲಿ ಪ್ರಭಾತೋದಯಕ್ಕಿಂತ ಮೊದಲು ಸಂಕಲ್ಪ ಮಾಡುವುದು ಕಡ್ಡಾಯವಾಗಿದೆ. ಅಲ್ಲಾಹನ ಸಂಪ್ರೀತಿಗಾಗಿ ನಾನು ಉಪವಾಸ ಮಾಡುತ್ತೇನೆಂದು ಸಂಕಲ್ಪ ಮಾಡುವುದು ನಿಯ್ಯತ್ತಾಗಿದೆ.

2. ಪ್ರಭಾತೋದಯದಿಂದ ಸೂರ್ಯಾಸ್ತದವರೆಗೆ ಉಪವಾಸ ಭಂಗವಾಗುವ ಕಾರ್ಯಗಳಿಂದ ದೂರವಿರಬೇಕು. ಅಂದರೆ ಮರೆವಿನಿಂದ ತಿಂದರೆ, ಕುಡಿದರೆ ಉಪವಾಸ ಭಂಗವಾಗುವುದಿಲ್ಲ. ಮಕ್ಕಳಿಗೆ ನಮಾಝ್‌ನಂತೆ ಉಪವಾಸವನ್ನು ಕೂಡಾ ಏಳು ವರ್ಷ ಪ್ರಾಯದಿಂದ ಹಿಡಿಯುವಂತೆ ಅಭ್ಯಾಸ ಮಾಡಿಸಬೇಕು.

### ನಾವೇನು ಕಲಿತೆವು

1. ಪವಿತ್ರ ಕುರ್‌ಆನ್ ಅವತೀರ್ಣವಾದ ತಿಂಗಳು ರಮಝಾನಾಗಿದೆ.
2. ರಮಝಾನ್‌ನಲ್ಲಿ ಉಪವಾಸ ಹಿಡಿಯುವುದು ಕಡ್ಡಾಯವಾಗಿದೆ.
3. ಉಪವಾಸಿಗನು ಕೆಟ್ಟ ಮಾತು ವರ್ತನೆಯನ್ನು ತೊರೆಯಬೇಕಾಗಿದೆ.
4. ರಮಝಾನ್‌ನ ಚಂದ್ರೋದಯವನ್ನು ನಂಬಿಗಸ್ಥನಾದ ಒಬ್ಬ ವ್ಯಕ್ತಿ ನೋಡಿದರೆ ಎಲ್ಲರೂ ಉಪವಾಸ ಹಿಡಿಯಬೇಕು.

### ಅಭ್ಯಾಸ

**A** ಉತ್ತರ ಬರೆಯಿರಿ

1. ಉಪವಾಸದ ಮುಖ್ಯ ಘಟಕಗಳು ಯಾವುವು?
2. ಉಪವಾಸ ಕಡ್ಡಾಯವಾಗಲು ಆವಶ್ಯಕವಾದ ನಿಬಂಧನೆಗಳು ಯಾವುವು?
3. ಆತ್ಮಸಂಸ್ಕರಣೆ ಪಡೆಯಲು ಉಪವಾಸ ಹೇಗೆ ಉಪಯುಕ್ತವಾಗುತ್ತದೆ?

**B.** ಅರ್ಥವನ್ನು ಹೇಳಿರಿ

1. .................................. هُدًى لِلنَّاس
2. .................................. فَلْيَصُمْهُ
3. .................................. قَوْلَ الزُّور
4. ........................... فَلَيْسَ لِلّٰهِ حَاجَة

ಪಾಠ-6

# ಉಪವಾಸ ಆಚರಿಸಲು ಸಾಧ್ಯವಿಲ್ಲದವರು

ಪ್ರಜ್ಞಾವಂತರು ಮತ್ತು ಪ್ರೌಢರಾದ ಎಲ್ಲ ಮುಸ್ಲಿಮರಿಗೂ ಉಪವಾಸ ಕಡ್ಡಾಯವಾಗಿದೆ. ರೋಗಿಗಳಿಗೆ ಮತ್ತು ಯಾತ್ರಿಕರಿಗೆ ಉಪವಾಸ ಹಿಡಿಯುವುದರಲ್ಲಿ ರಿಯಾಯಿತಿ ಅನುಮತಿಸಲಾಗಿದೆ. ಮುಟ್ಟು, ಪ್ರಸವಾನಂತರ ಅಶುದ್ಧಿಯಿರುವ ಮಹಿಳೆಯರು ಶುದ್ಧವಾಗುವ ವರೆಗೂ ಉಪವಾಸ ಆಚರಿಸುವಂತಿಲ್ಲ. ಅವರು ತಮಗೆ ನಷ್ಟವಾದ ಉಪವಾಸಗಳನ್ನು ಇತರ ಸಮಯದಲ್ಲಿ ಹಿಡಿದು ಪೂರ್ತಿ ಮಾಡಬೇಕು. ರೋಗಿಗಳು, ಪ್ರಯಾಣಿಕರು ಗರ್ಭಿಣಿಯರು, ಮೊಲೆಯೂಡಿಸುವವರು ಕೂಡಾ ಅವರ ತೊಂದರೆಗಳು ದೂರವಾದ ಇತರ ಸಂದರ್ಭಗಳಲ್ಲಿ ಉಪವಾಸ ಆಚರಿಸಬೇಕು.

ಅಲ್ಲಾಹನು ಹೇಳುತ್ತಾನೆ.

فَمَنْ كَانَ مِنكُم مَّرِيضًا أَوْ عَلَىٰ سَفَرٍ فَعِدَّةٌ مِّنْ أَيَّامٍ أُخَرَ (البقرة)

"ನೀವೆಲ್ಲಾದರೂ ರೋಗಿಯಾಗಿದ್ದರೆ ಅಥವಾ ಪ್ರಯಾಣದಲ್ಲಿದ್ದರೆ ಇತರ ದಿನಗಳಲ್ಲಿ ಅಷ್ಟೇ ಸಂಖ್ಯೆಯನ್ನು ಪೂರ್ತಿಗೊಳಿಸಿಕೊಳ್ಳಬೇಕು."

## ಪ್ರಾಯಶ್ಚಿತ್ತ ಕೊಡಬೇಕಾದವರು

ಅತ್ಯಂತ ವೃದ್ಧರು, ರೋಗ ಗುಣಹೊಂದುವ ನಿರೀಕ್ಷೆಯಿಲ್ಲದವರು ಮುಂತಾದವರಿಗೆ ಉಪವಾಸ ಆಚರಿಸುವುದರಲಿ ರಿಯಾಯಿತಿ ಇದೆ. ಉಪವಾಸಕ್ಕೆ ಬದಲಿಯಾಗಿ ಅವರು ದಿನಂಪ್ರತಿ ಒಬ್ಬ ಬಡವನಿಗೆ ಆಹಾರ ನೀಡುವುದು ಕಡ್ಡಾಯವಾಗಿದೆ.

ಮೇಲೆ ಹೇಳಿರುವಂತಹ ಸೂಕ್ತ ಕಾರಣಗಳಲ್ಲದೆ ಉಪವಾಸ ತೊರೆಯಬಾರದು. ಹಾಗೆ ಉಪವಾಸ ತೊಡೆಯುವ ಒಂದು ದಿವಸಕ್ಕೆ ಬದಲಿಯಾಗಿ ಜೀವಮಾನವಿಡೀ ಉಪವಾಸ ಆಚರಿಸಿದರೂ ಅದಕ್ಕೆ ಸಮಾನವಾಗಲಾರದು ಎಂದು ಪ್ರವಾದಿ(ಸ) ಹೇಳಿದ್ದಾರೆ.

### ನಾವೇನು ಕಲಿತೆವು

1. ಮುಟ್ಟಿನ ಮತ್ತು ಹೆರಿಗೆಯ ಅಶುದ್ಧಿಯಿರುವ ಮಹಿಳೆಯರು ಉಪವಾಸ ಆಚರಿಸುವಂತಿಲ್ಲ.

2. ರೋಗಿಗಳಿಗೂ ಪ್ರಯಾಣಿಕರಿಗೂ ಆ ಸ್ಥಿತಿಯಲ್ಲಿ ಉಪವಾಸ ಕಡ್ಡಾಯವಿಲ್ಲ.
3. ಅತಿ ವೃದ್ಧರು ಮತ್ತು ಶಮನವಾಗದಂತಹ ರೋಗವಿರುವವರು ಉಪವಾಸ ತೊರೆಯುವುದಾದರೆ ಪ್ರಾಯಶ್ಚಿತ್ತ ನೀಡಬೇಕಾಗಿದೆ.

## ಅಭ್ಯಾಸ

1. ಉಪವಾಸ ಆಚರಿಸುವುದರಲ್ಲಿ ಯಾರಿಗೆ ರಿಯಾಯತಿ ನೀಡಲಾಗಿದೆ?
2. ಉಪವಾಸ ತೊರೆದುದಕ್ಕೆ ಯಾರು ಪ್ರಾಯಶ್ಚಿತ್ತ ನೀಡಬೇಕು?

## ಪಾಠ-7

# ಐಚ್ಛಿಕ ಉಪವಾಸಗಳು

ನಮಾಝ್‌ನಂತೆಯೇ ಕಡ್ಡಾಯ ಉಪವಾಸವಲ್ಲದೆ ಕೆಲವು ಸುನ್ನತ್ ಉಪವಾಸಗಳಿವೆ. ಪ್ರವಾದಿವರ್ಯರು(ಸ) ಕೆಲವು ವಿಶೇಷ ದಿವಸಗಳಲ್ಲಿ ಉಪವಾಸ ಆಚರಿಸಿದ್ದಾರೆ ಮತ್ತು ಇತರರನ್ನು ಉಪವಾಸ ಆಚರಿಸಲು ಪ್ರೇರೇಪಿಸಿದ್ದಾರೆ. ಅವು ಈ ಕೆಳಗಿನಂತಿವೆ:

### 1. ಶವ್ವಾಲ್ ತಿಂಗಳ ಆರು ಉಪವಾಸಗಳು

"ಯಾರಾದರೂ ರಮಝಾನ್ ತಿಂಗಳಲ್ಲಿ ಉಪವಾಸ ಪೂರ್ಣಗೊಳಿಸಿ ಶವ್ವಾಲ್ ತಿಂಗಳಲ್ಲಿ ಆರು ದಿವಸಗಳ ಉಪವಾಸವನ್ನು ಮುಂದುವರಿಸಿದರೆ, ಅವನು ಒಂದು ವರ್ಷವಿಡೀ ಉಪವಾಸ ಆಚರಿಸಿದ್ದಕ್ಕೆ ಸಮಾನವಾಗಿದೆ" ಎಂದು ಪ್ರವಾದಿವರ್ಯರು(ಸ) ಹೇಳಿರುವುದಾಗಿ ಇಮಾಮ್ ಮುಸ್ಲಿಮ್ ಮತ್ತಿತರರು ವರದಿ ಮಾಡಿದ್ದಾರೆ.

### 2. ದುಲ್ ಹಜ್ಜ್ 9

ಇದು ಹಾಜಿಗಳೆಲ್ಲರೂ ಅರಫಾದಲ್ಲಿ ಒಟ್ಟು ಸೇರುವ ಪುಣ್ಯ ದಿವಸವಾಗಿದೆ. "ಅರಫಾ ದಿವಸದಲ್ಲಿ ಉಪವಾಸ ಆಚರಿಸಿದರೆ ಕಳೆದು ಹೋದ ಮತ್ತು ಬರಲಿರುವ ಎರಡು ವರ್ಷಗಳ ಪಾಪಗಳು ಕ್ಷಮಿಸಲ್ಪಡುವುದೆಂದು" ಪ್ರವಾದಿವರ್ಯರು(ಸ) ಹೇಳಿದ್ದಾರೆ. ಹಜ್ಜ್ ಮಾಡುವವರಿಗೆ ಈ ಉಪವಾಸ ಐಚ್ಛಿಕವೂ ಅಲ್ಲ.

### 3. ಆಶುರಾಅ್

ಮುಹರ್ರಮ್ ತಿಂಗಳ 10ನೇ ದಿವಸ ಉಪವಾಸ ಆಚರಿಸುವುದು ಪ್ರಮುಖ ಸುನ್ನತ್(ಐಚ್ಛಿಕ)ನಲ್ಲಿ ಸೇರಿದೆ. ಈ ದಿವಸನ್ನು 'ಆಶುರಾಅ್' ಎಂದು ಹೇಳುವುದು. ಇದು ಪ್ರವಾದಿ ಮೂಸಾ(ಅ) ಮತ್ತು ಬನೂ ಇಸ್ರಾಈಲ್‌ರನ್ನು ಫಿರ್‌ಔನ್‌ನ ಮರ್ದನದಿಂದ ಅಲ್ಲಾಹನು ರಕ್ಷಿಸಿದ ದಿವಸವಾಗಿದೆ. ಆ ದಿವಸ ಪ್ರವಾದಿವರ್ಯರು(ಸ) ಉಪವಾಸ ಆಚರಿಸಿ ಇತರರನ್ನು ಉಪವಾಸ ಹಿಡಿಯುವಂತೆ ಪ್ರೇರೇಪಿಸಿದ್ದಾರೆ. ಅದರೊಂದಿಗೆ ಮುಹರ್ರಮ್ ಒಂಬತ್ತಕ್ಕೂ ಉಪವಾಸ ಐಚ್ಛಿಕ(ಸುನ್ನತ್)ವಾಗಿದೆ.

ಅಲ್ಲದೆ ಎಲ್ಲಾ ತಿಂಗಳಲ್ಲಿಯೂ ಕೆಲವು ದಿವಸಗಳಲ್ಲಿ ಪ್ರವಾದಿವರ್ಯರು(ಸ) ಉಪವಾಸ ಆಚರಿಸಿದ್ದಾರೆಂದು ಹದೀಸ್‌ಗಳಲ್ಲಿ ವರದಿಯಾಗಿದೆ. ಎರಡು ಹಬ್ಬಗಳು, (ಬಕ್ರೀದ್ ಮತ್ತು ಈದುಲ್ ಫಿತರ್) ಮತ್ತು ಬಕ್ರೀದ್ ನಂತರದ ಮೂರು ದಿವಸಗಳಲ್ಲಿ

(ಅಯ್ಯಾಮುತ್ತಶ್‌ರೀಕ್) ಶಅ್‌ಬಾನ್ ಮೂವತ್ತನೇ ದಿವಸ ರಮಝಾನ್ ಆಗಿರಬಹುದೆಂದು ಸಂದೇಹದಿಂದ (يَوْمُ الشَّكِّ) ಉಪವಾಸ ಹಿಡಿಯುವುದು ನಿಷಿದ್ಧವಾಗಿದೆ. ಉಳಿದ ದಿವಸಗಳಲ್ಲಿ ಸುನ್ನತ್(ಐಚ್ಛಿಕ) ಉಪವಾಸ ಹಿಡಿಯುವುದರಲ್ಲಿ ವಿರೋಧವಿಲ್ಲ. ಚಾಂದ್ರಮಾನ ತಿಂಗಳ ಮಧ್ಯೆದಲ್ಲಿ ಬರುವ 13, 14, 15, ದಿವಸಗಳಲ್ಲಿ (اَلْأَيَّامُ الْبِيضُ) ಸೋಮವಾರ, ಗುರುವಾರದ ದಿವಸಗಳಲ್ಲಿ ಉಪವಾಸ ಆಚರಣೆ ಐಚ್ಛಿಕ/ಸುನ್ನತಾಗಿದೆ. ಅಲ್ಲಾಹನ ಪ್ರತಿಫಲ ಹೆಚ್ಚು ಸಿಗುವುದಕ್ಕೆ ಸುನ್ನತ್(ಐಚ್ಛಿಕ) ಉಪವಾಸಗಳು ಸಹಾಯಕವಾಗಿದೆ.

ಅಭ್ಯಾಸ

1. ಮುಖ್ಯ ಉಪವಾಸಗಳು ಯಾವುವು?
2. 'ಆಶುರಾಅ್' ಯಾವ ದಿವಸವಾಗಿದೆ?
3. ಸುನ್ನತ್ (ಐಚ್ಛಿಕ) ಉಪವಾಸಗಳನ್ನು ಹಿಡಿಯುವುದು ಯಾಕೆ?

## ಪಾಠ-8

# ಉಪವಾಸದ ಶಿಷ್ಟಾಚಾರಗಳು

ಉಪವಾಸ ಆಚರಿಸುವವರು ಕೆಲವು ಶಿಷ್ಟಾಚಾರಗಳನ್ನು ಪಾಲಿಸಬೇಕಾಗಿದೆ. ಅವುಗಳನ್ನು ಈ ಕೆಳಗೆ ವಿವರಿಸಲಾಗುವುದು.

**1.** ಸಹ್ರಿ ಸೇವನೆ; ಸಹ್ರಿ ಸೇವನೆಯು ಸುನ್ನತ್ತಾಗಿದೆ. ಪ್ರವಾದಿವರ್ಯರು(ಸ) ಹೇಳುತ್ತಾರೆ.

تَسَحَّرُوا فَاِنَّ فِي السُّحُورِ بَرَكَةً (متفق عليه)

"ನೀವು ಸಹ್ರಿ ಸೇವನೆ ಮಾಡಿರಿ, ಖಂಡಿತವಾಗಿಯೂ ಅದರಲ್ಲಿ ಸಮೃದ್ಧಿಯಿದೆ" ಪ್ರಭಾತದಲ್ಲಿ ಉಪವಾಸದ ಸಮಯ ಆರಂಭಗೊಳ್ಳುವುದಕ್ಕಿಂತ ಮುಂಚೆ ಸಹ್ರಿ ಸೇವನೆ ಮಾಡಬೇಕಾಗಿದೆ, ಹಗಲಲ್ಲಿ ಬಾಯಾರಿಕೆ ಹಸಿವನ್ನು ಸಹಿಸಿಕೊಳ್ಳುವುದಕ್ಕೆ ಶರೀರಕ್ಕೆ ಅದರಿಂದಾಗಿ ಶಕ್ತಿ ಲಭಿಸುವುದು. ಹೆಚ್ಚು ಉಣ್ಣಬೇಕಾಗಿಲ್ಲ. ಮಧ್ಯರಾತ್ರಿಯಿಂದ ಪ್ರಭಾತೋದಯದ ವರೆಗೆ ಸಹ್ರಿ ಸೇವಿಸುವ ಸಮಯವಾಗಿದೆ. ಪ್ರವಾದಿವರ್ಯರ(ಸ) ಸಹಾಬಿಗಳು(ಸಂಗಾತಿಗಳು) ತಡವಾಗಿ ಸಹ್ರಿ ಉಣ್ಣುತ್ತಿದ್ದರು. ಉಪವಾಸ ತೊರೆಯುವ ಸಮಯವಾದ ಕೂಡಲೆ ಉಪವಾಸ ತೊರೆಯುತ್ತಿದ್ದರೆಂದು(ಹದೀಸ್‌ಗಳಲ್ಲಿ) ವರದಿಯಾಗಿವೆ.

**2.** ಸಮಯವಾದ ಕೂಡಲೇ ಉಪವಾಸ ತೊರೆಯುವುದು; ಸೂರ್ಯಾಸ್ತಮಾನ ದೃಢಗೊಂಡನೆ ಉಪವಾಸ ತೊರೆಯುವುದು ಸುನ್ನತ್ತಾಗಿದೆ. ಪ್ರವಾದಿವರ್ಯರು(ಸ) ಹೇಳುತ್ತಾರೆ;

لَا يَزَالُ النَّاسَ بِخَيْرٍ مَا عَجَّلُوا الْفِطْرَ (متفق عليه)

"ಬೇಗನೆ ಉಪವಾಸ ತೊರೆಯುವ ಕಾಲದವರೆಗೂ ಜನರು ಒಳಿತಿನಲ್ಲಿರುವರು"

ಖರ್ಜೂರದಿಂದ ಉಪವಾಸ ತೊರೆಯುವುದು ಉತ್ತಮವಾಗಿದೆ. ಅದಿಲ್ಲವಾದರೆ ನೀರಿನಿಂದ ಉಪವಾಸ ತೊರೆಯಬಹುದು.

**3.** ಪ್ರಾರ್ಥನೆ: ಉಪವಾಸ ತೊರೆಯುವಾಗ ಪ್ರಾರ್ಥಿಸುವುದು ಸುನ್ನತ್ತಾಗಿದೆ. ಉಪವಾಸ ಆಚರಿಸುವವನು ಉಪವಾಸ ತೊರೆಯುವ ಸಮಯದಲ್ಲಿ ತಿರಸ್ಕರಿಸಲ್ಪಡದಂತಹ ಒಂದು ಪ್ರಾರ್ಥನೆಯಿದೆ.

ಉಪವಾಸ ತೊರೆಯುವ ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ಹೀಗೆ ಹೇಳುತ್ತಿದ್ದರು;

اَللّٰهُمَّ لَكَ صُمْتُ وَعَلٰى رِزْقِكَ أَفْطَرْتُ

"ಅಲ್ಲಾಹನೇ, ನಾನು ನಿನಗಾಗಿ ಉಪವಾಸ ಆಚರಿಸಿದೆನು. ನಿನ್ನ ಆಹಾರದಿಂದಲೇ ಉಪವಾಸ ತೊರೆದೆನು."

ذَهَبَ الظَّمَأُ وَابْتَلَّتِ الْعُرُوقِ وَثَبَتَ الْأَجْرُ إِنْ شَاءَ اللّٰهُ تَعَالَى

"ಬಾಯಾರಿಕೆ ಶಮನಗೊಂಡಿತು. ನರಗಳು ತೇವಗೊಂಡವು. ಅಲ್ಲಾಹನು ಇಚ್ಛಿಸಿದರೆ ಪ್ರತಿಫಲ ಖಚಿತವಾಯಿತು."

**4.** ದಾನಧರ್ಮಗಳು, ಪವಿತ್ರ ಕುರ್‌ಆನ್ ಪಾರಾಯಣ, ಸುನ್ನತ್(ಐಚ್ಛಿಕ) ನಮಾಝ್ ಮುಂತಾದ ಸತ್ಕರ್ಮಗಳನ್ನು ಹೆಚ್ಚಿಸುವುದು. ಇದು ರಮಝಾನ್ ಕೊನೆಯ ಹತ್ತರಲ್ಲಿ (ದಿವಸಗಳಲ್ಲಿ) ಪ್ರಾಮುಖ್ಯವಾಗಿರುವ ಸುನ್ನತ್ತಾಗಿದೆ.

**5.** ಅನಾವಶ್ಯಕ ಮಾತು ವರ್ತನೆಗಳಿಂದ ದೂರವಿರುವುದು ಇತರರೊಂದಿಗೆ ತರ್ಕ ಮಾಡುವುದು. ಅಸಭ್ಯ ಮಾತು ಹೇಳುವುದು ಮುಂತಾದ ಕೆಟ್ಟ ವಿಚಾರಗಳಿಂದ ಉಪವಾಸಿಗನು ದೂರವಿರಬೇಕೆಂದು (ಹದೀಸ್‌ಗಳಿವೆ) ವರದಿಯಾಗಿವೆ.

ಉಪವಾಸಿಗನು ಯಾವ ಸಮಯದಲ್ಲಿಯೂ ಸ್ನಾನ ಮಾಡಬಹುದಾಗಿದೆ. ಮುಳುಗಿ ಸ್ನಾನ ಮಾಡುವುದರಲ್ಲಿಯೂ ಅಡ್ಡಿಯಿಲ್ಲ. ಉಪವಾಸದ ಸಮಯದಲ್ಲಿ ಹಲ್ಲು ಉಜ್ಜುವುದು, ಸುಗಂಧ ವಸ್ತುಗಳನ್ನು ಉಪಯೋಗಿಸುವುದು ಕೂಡಾ ಅನುವದನೀಯವಾಗಿದೆ.

### ನಾವೇನು ಕಲಿತೆವು

1. ಉಪವಾಸಿಗನು ಸಹ್ರಿ ಸೇವಿಸುವುದು ಸುನ್ನತ್ತಾಗಿದೆ.
2. ಸಮಯವಾದೊಡನೆ ಉಪವಾಸ ತೊರೆಯುವುದು ಉಪವಾಸದ ಶಿಷ್ಟಾಚಾರ ಗಳಲ್ಲಿ ಸೇರಿದ್ದಾಗಿದೆ.
3. ಉಪವಾಸಿಗನು ಯಾವ ಸಮಯದಲ್ಲಿಯೂ ಹಲ್ಲುಜ್ಜಬಹುದಾಗಿದೆ.

### ಅಭ್ಯಾಸ

**A.** ಉತ್ತರ ಬರೆಯಿರಿ

1. ಉಪವಾಸ ತೊರೆಯುವಾಗ ಪಠಿಸುವ ಪ್ರಾರ್ಥನೆ ಯಾವುದು?
2. ಉಪವಾಸ ಆಚರಿಸುವವನು ಪಾಲಿಸಬೇಕಾದ ಶಿಷ್ಟಾಚಾರಗಳು ಯಾವುವು?

**B.** ಅರ್ಥ ಬರೆಯಿರಿ

1. ............................ لَا يَزَالُ النَّاسَ بِخَيْرٍ
2. ............................ اِنَّ فِي السُّحُورِ بَرَكَةً
3. ............................ اَللّٰهُمَّ لَكَ صُمْتُ
4. ............................ ذَهَبَ الظَّمَأُ

ಪಾಠ-9

# ಉಪವಾಸ ದುರ್ಬಲವಾಗುವ ಕಾರ್ಯಗಳು

ಉಪವಾಸ ಪ್ರಭಾತದಿಂದ ಸೂರ್ಯಾಸ್ತಮಾನದ ವರೆಗೂ ದೀರ್ಘವಾಗಿರುವಂತಹ ಒಂದು ಆರಾಧನೆಯಾಗಿದೆ. ಈ ಅವಧಿಯಲ್ಲಿ ಉಪವಾಸ ದುರ್ಬಲಗೊಳ್ಳುವ ಕಾರ್ಯಗಳಾಗದಂತೆ ನಾವು ಎಚ್ಚರಿಕೆ ವಹಿಸಬೇಕು. ಅಂತಹ ಕಾರ್ಯಗಳಲ್ಲಿ ಯಾವುದಾದರೂ ಸಂಭವಿಸಿದರೆ ಉಪವಾಸ ಭಂಗವಾಗುತ್ತದೆ. ಆ ಉಪವಾಸವನ್ನು ಇನ್ನೊಮ್ಮೆ ಹಿಡಿದು ಪೂರ್ತಿಗೊಳಿಸಬೇಕಾಗುತ್ತದೆ. ಉಪವಾಸ ಭಂಗಗೊಳ್ಳುವ ಕಾರ್ಯಗಳನ್ನು ಈ ಕೆಳಗೆ ವಿವರಿಸಲಾಗಿದೆ.

1. ಪ್ರಜ್ಞಾಪೂರ್ವಕವಾಗಿ ತಿನ್ನಬಾರದು ಕುಡಿಯಬಾರದು. ಅದರಿಂದ ಉಪವಾಸ ದುರ್ಬಲವಾಗುತ್ತದೆ. ಅಂದರೆ ಮರೆವಿನಿಂದ ಅಥವಾ ನಿರ್ಬಂಧಿಸಲ್ಪಟ್ಟು ತಿಂದರೆ, ಕುಡಿದರೆ ಉಪವಾಸ ಭಂಗವಾಗುವುದಿಲ್ಲ. ಅದಕ್ಕೆ ಬದಲಿ ಉಪವಾಸವನ್ನು ಹಿಡಿಯಬೇಕಾಗಿಲ್ಲ. ಪ್ರವಾದಿವರ್ಯರು(ಸ) ಹೇಳುತ್ತಾರೆ.

مَنْ نَسِيَ وَهُوَ صَائِمٌ فَأَكَلَ اَوْ شَرِبَ فَلْيُتِمَّ صَوْمَهُ فَإِنَّمَا أَطْعَمَهُ اللهُ وَسَقَاهُ (متفق عليه)

"ಉಪವಾಸ ಹಿಡಿದು ಯಾರಾದರೂ ಮರೆತು ತಿಂದರೆ ಮತ್ತು ಕುಡಿದರೆ ಆತ ತನ್ನ ಉಪವಾಸವನ್ನು ಪೂರ್ತಿಗೊಳಿಸಲಿ. ಅವನಿಗೆ ಅಲ್ಲಾಹನೇ ತಿನ್ನಿಸಿರುವುದು ಮತ್ತು ಕುಡಿಸಿರುವುದು."

2. ಉದ್ದೇಶಪೂರ್ವಕವಾಗಿ ವಾಂತಿ ಮಾಡಿದರೆ ಉಪವಾಸ ಭಂಗಗೊಳ್ಳುತ್ತದೆ. ಆದರೆ ಅನಿಯಂತ್ರಿತವಾಗಿ ವಾಂತಿ ಮಾಡಿದರೆ ಉಪವಾಸ ದುರ್ಬಲವಾಗುವುದಿಲ್ಲ.

3. ಮಹಿಳೆಯರಿಗೆ ಆರ್ತವ ರಕ್ತ ಮತ್ತು ಪ್ರಸವ ರಕ್ತ ಸೋರಿಕೆಯುಂಟಾಗುತ್ತದೆ.

4. ವೀರ್ಯ ಸ್ಖಲನ, ಚುಂಬಿಸುವುದು ಮುಂತಾದ ಕಾರಣಗಳಿಂದ ವೀರ್ಯ ಸ್ಖಲನವಾದರೆ ಉಪವಾಸ ದುರ್ಬಲವಾಗುತ್ತದೆ. ಅಂದರೆ ಸ್ವಪ್ನ ಮುಂತಾದ ನಿಯಂತ್ರಣಕ್ಕೆ ಮೀರಿದ ಕಾರಣಗಳಿಂದ ಸ್ಖಲನ ನಡೆದರೆ ಉಪವಾಸ ದುರ್ಬಲಗೊಳ್ಳುವುದಿಲ್ಲ. ಸಂಯೋಗದಿಂದ ಉಪವಾಸ ದುರ್ಬಲವಾಗುತ್ತದೆ. ಆ ಉಪವಾಸ ನಂತರ ಪೂರ್ತಿಗೊಳಿಸುವುದಲ್ಲದೆ

ಪ್ರಾಯಶ್ಚಿತ್ತವನ್ನು ನೀಡಬೇಕಾಗಿದೆ. ಓರ್ವ ಗುಲಾಮನ ವಿಮೋಚನೆ ಅಥವಾ ಎರಡು ತಿಂಗಳು ನಿರಂತರ ಉಪವಾಸ ಅಥವಾ 60 ಮಂದಿ ನಿರ್ಗತಿಕರಿಗೆ ಆಹಾರ ನೀಡುವುದು ಪ್ರಾಯಶ್ಚಿತ್ತವಾಗಿದೆ.

ಬಾಕಿಯಾಗಿರುವ ಉಪವಾಸಗಳನ್ನು ಮುಂದಿನ ರಮಝಾನ್ ಬರುವ ಮುಂಚೆ ಪೂರ್ತಿಗೊಳಿಸಬೇಕಾಗಿದೆ. ರಮಝಾನ್ ತಿಂಗಳು ಮುಗಿದ ಕೂಡಲೇ ಆ ಉಪವಾಸ ಹಿಡಿಯಬೇಕೆಂದಿಲ್ಲ. ನಿರಂತರವಾಗಿ ಆಗ ಬೇಕೆಂದಿಲ್ಲ. ಬಾಕಿಯಾಗಿರುವುದಕ್ಕಿಂತ ಹೆಚ್ಚು ಆಚರಿಸಬೇಕೆಂದಿಲ್ಲ.

### ನಾವೇನು ಕಲಿತೆವು

1. ಉಪವಾಸಿಗನು ಉಪವಾಸ ದುರ್ಬಲಗೊಳ್ಳುವ ಕಾರ್ಯಗಳ ಬಗ್ಗೆ ಎಚ್ಚರಿಕೆಯಿಂದ ಇರಬೇಕು.
2. ಉಪವಾಸ ಭಂಗಗೊಳ್ಳುವ ಕಾರ್ಯಗಳು ಮರೆವಿನಿಂದಾಗಿ ಸಂಭವಿಸಿದರೆ ಉಪವಾಸ ದುರ್ಬಲಗೊಳ್ಳುವುದಿಲ್ಲ.
3. ಬಾಕಿಯಾಗಿರುವ ಉಪವಾಸವನ್ನು ಮುಂಬರುವ ರಮಝಾನ್ ತಿಂಗಳಿಗಿಂತ ಮೊದಲು ಪೂರ್ತಿಗೊಳಿಸಬೇಕಾಗಿದೆ.

### ಅಭ್ಯಾಸ

1. ಉಪವಾಸ ಭಂಗಗೊಳ್ಳುವ ಕಾರ್ಯಗಳು ಯಾವುವು?
2. ಆಧಾರ ನೀಡಿರಿ; ಉಪವಾಸ ಭಂಗವಾಗುವ ಕಾರ್ಯಗಳು ನೆನಪಿಲ್ಲದೇ ಸಂಭವಿಸಿದರೆ ಉಪವಾಸ ಭಂಗವಾಗುವುದಿಲ್ಲ.
3. ಬಾಕಿಯಾದ ಉಪವಾಸಕ್ಕಿಂತ ಹೆಚ್ಚು ಉಪವಾಸವನ್ನು ಹಿಡಿಯಬೇಕಾಗಿದೆಯೇ?

## ಪಾಠ-10

# ಲೈಲತುಲ್ ಕದ್ರ್

# ليلة القدر

ಲೈಲತುಲ್ ಕದ್ರ್ (ನಿರ್ಣಾಯಕ ರಾತ್ರಿ) ರಮಝಾನ್‌ನಲ್ಲಿ ಅತ್ಯಂತ ಪುಣ್ಯವಿರುವ ರಾತ್ರಿಯಾಗಿದೆ. ಪವಿತ್ರ ಕುರ್‌ಆನ್ ಅವತೀರ್ಣವಾಗಲು ಆರಂಭಗೊಂಡದ್ದು ಆ ರಾತ್ರಿಯಲ್ಲಾಗಿದೆ. ಆ ರಾತ್ರಿಯು ಸಾವಿರ ತಿಂಗಳಿಗಿಂತ ಉತ್ತಮವಾದುದಾಗಿದೆ.

لَيْلَةُ الْقَدْرِ خَيْرٌ مِنْ أَلْفِ شَهْرٍ (القدر)

"ಪ್ರತಿಷ್ಠಿತ ರಾತ್ರಿಯು ಸಾವಿರ ಮಾಸಗಳಿಗಿಂತಲೂ ಶ್ರೇಷ್ಠವಾಗಿದೆ."

ರಮಝಾನ್‌ನ ಕೊನೆಯ ಹತ್ತರಲ್ಲಿ ಒಂಟಿ ರಾತ್ರಿಗಳಲ್ಲಿ ಲೈಲತುಲ್ ಕದ್ರ್‌ನ ರಾತ್ರಿಯಿರುತ್ತದೆ ಎಂದು ಹದೀಸ್‌ಗಳಿಂದ ಗ್ರಹಿಸಬಹುದಾಗಿದೆ. ಅದು ಯಾವ ದಿನ ರಾತ್ರಿಯೆಂದು ಸ್ಪಷ್ಟವಾಗಿ ನಮಗೆ ಪ್ರವಾದಿವರ್ಯರಾಗಲಿ(ಸ) ಅಲ್ಲಾಹನಾಗಲಿ ಸ್ಪಷ್ಟವಾಗಿ ತಿಳಿಸಿಕೊಟ್ಟಿಲ್ಲ. ಅಂದರೆ ರಮಝಾನಿನ ಕೊನೆಯ ಹತ್ತರಲ್ಲಿ ಈ ರಾತ್ರಿಯನ್ನು ನಿರೀಕ್ಷಿಸಲು ಪ್ರವಾದಿವರ್ಯರು(ಸ) ಸೂಚಿಸಿದ್ದಾರೆ. ಆ ದಿವಸಗಳಲ್ಲಿ ಪ್ರವಾದಿವರ್ಯರು(ಸ) ನಮಾಝ್ ಇತ್ಯಾದಿ ಕರ್ಮಗಳಲ್ಲಿ ಮುಳುಗುತ್ತಿದ್ದರು ಮತ್ತು ಕುಟುಂಬವನ್ನು ಅದಕ್ಕಾಗಿ ಎಬ್ಬಿಸುತ್ತಿದ್ದರು.

ಪ್ರವಾದಿವರ್ಯರು(ಸ) ಹೇಳುತ್ತಾರೆ:

مَنْ قَامَ لَيْلَةَ الْقَدْرِ إِيمَانًا وَاحْتِسَابًا غُفِرَ لَهُ مَا تَقَدَّمَ مِنْ ذَنْبِهِ
(متفق عليه)

"ವಿಶ್ವಾಸವಿಟ್ಟು ಪ್ರತಿಫಲಾಕಾಂಕ್ಷೆಯಿಂದ ಲೈಲತುಲ್ ಕದ್ರ್‌ನಲ್ಲಿ ಯಾರಾದರೂ ನಮಾಝ್ ಮಾಡಿದರೆ ಅವರ ಗತ ಪಾಪಗಳೆಲ್ಲವೂ ಕ್ಷಮಿಸಲ್ಪಡುವುದು" ಅಲ್ಲಾಹ್ ತನ್ನ ದಾಸರ ಪಾಪಗಳನ್ನು ಕ್ಷಮಿಸಿ ಅವರ ಬಯಕೆಗಳನ್ನು ಯಥೇಚ್ಛವಾಗಿ ಈಡೇರಿಸುವ ಸಂದರ್ಭವಿದು. ಅವು ಪ್ರಾರ್ಥನೆಗೆ ಉತ್ತರ ನೀಡುವ ಅನುಗ್ರಹೀತ ಕ್ಷಣಗಳಾಗಿವೆ. ರುಚಿಕರವಾದ ಫಲಾಹಾರ ಮತ್ತು ಸಂಪುಷ್ಟವಾದ ಔತಣ ಕೂಟಕ್ಕಾಗಿ ಆ ರಾತ್ರಿಯನ್ನು

ವಿನಿಯೋಗಿಸದೆ ಪಾಪ ವಿಮೋಚನೆಗಾಗಿ ಪ್ರಾರ್ಥನೆಗಳು, ಪವಿತ್ರ ಕುರ್‌ಆನ್ ಪಾರಾಯಣ, ಸುದೀರ್ಘ ನಮಾಝ್, ದಿಕ್ರ್ ಮುಂತಾದ ಪುಣ್ಯ ಕರ್ಮಗಳನ್ನು ಹೆಚ್ಚಿಸುವುದಕ್ಕಾಗಿ ಬಳಸಬೇಕಾಗಿದೆ. ಆ ಪವಿತ್ರ ರಾತ್ರಿಯ ದಿವ್ಯಾನುಗ್ರಹಗಳನ್ನು ನಿಷೇಧಿಸುವವನು ಅತಿ ಹೆಚ್ಚು ಭಾಗ್ಯಹೀನನಾಗಿರುತ್ತಾನೆ.

## ನಾವೇನು ಕಲಿತೆವು

1. ಲೈಲತುಲ್ ಕದ್ರ್ ರಮಝಾನ್‌ನ ಪುಣ್ಯದಾಯಕ ರಾತ್ರಿಯಾಗಿದೆ.
2. ಪವಿತ್ರ ಕುರ್‌ಆನ್‌ನ ಅವತೀರ್ಣ ಲೈಲತುಲ್ ಕದ್ರ್‌ನಂದು ಆರಂಭವಾಯಿತು.
3. ಲೈಲತುಲ್ ಕದ್ರ್‌ನಲ್ಲಿ ಆರಾಧನೆಗಳನ್ನು ಹೆಚ್ಚಿಸಬೇಕಾಗಿದೆ.

## ಅಭ್ಯಾಸ

1. ಲೈಲತುಲ್ ಕದ್ರ್ ಯಾವಾಗ?
2. ಲೈಲತುಲ್ ಕದ್ರ್‌ನಲ್ಲಿ ವಿಶೇಷವಾಗಿ ಏನು ಮಾಡಬೇಕು?

## ಪಾಠ-11

# ಇಲ್‌ತಿಕಾಫ್

# اَلِاعْتِكَاف

'ಇಸ್ಲಾಮಿನಲ್ಲಿ ಸನ್ಯಾಸವಿಲ್ಲ'(لَارَهْبَانِيَةَ فِى الْإِسْلَامِ) ಎಂದು ನೀವು ಕಲಿತಿರಬಹುದು. ಕೆಲಸ ಮಾಡಿ ಕುಟುಂಬ ಜೀವನದಲ್ಲಿದ್ದು ಜನರೊಂದಿಗೆ ಬೆರೆತು ಸಾಮಾನ್ಯ ಜನರು ಜೀವಿಸುತ್ತಾರೆ. ಹೀಗೆ ಬದುಕುವಾಗ ಮಾನವರು ಪಾಲಿಸಬೇಕಾದ ಕಾನೂನು ಸಲಹೆಗಳನ್ನು ಇಸ್ಲಾಮ್ ಹೊಂದಿದೆ. ಮಾನವ ಜೀವನವು ದೇವಭಕ್ತಿ ಮತ್ತು ಒಳಿತಿನ ತಳಹದಿಯಲ್ಲಿರ ಬೇಕೆಂದು ಇಸ್ಲಾಮ್ ಕಲಿಸುತ್ತಿದೆ. ಕೆಲಸ ಮಾಡದೆ, ಕುಟುಂಬ ಮತ್ತು ಬೇರೆ ಜನರೊಂದಿಗೆ ಒಡನಾಟವನ್ನಿರಿಸದೆ ದೇವನನ್ನು ಮಾತ್ರವೇ ಸ್ಮರಿಸಿ ಕಾಲ ಕಳೆಯುವುದನ್ನು ಇಸ್ಲಾಮ್ ಪ್ರೋತ್ಸಾಹಿಸುವುದಿಲ್ಲ. ಬದಲಾಗಿ ನಮಾಝ್, ಉಪವಾಸ ಮುಂತಾದ ಕರ್ಮಗಳ ಮೂಲಕ ಸದಾ ಅಲ್ಲಾಹನ ಸ್ಮರಣೆಯನ್ನಿರಿಸಿಕೊಳ್ಳಬೇಕಾಗಿದೆ. ಇಲ್‌ತಿಕಾಫ್ ಎಂಬುದು ಬದುಕಿನ ವ್ಯವಹಾರದಲ್ಲಿ ವ್ಯಸ್ತರಾಗುವ ಮನುಷ್ಯರೊಳಗೆ ದೇವನ ಸ್ಮರಣೆ ಅಧಿಕಗೊಳಿಸಲು ಸಹಾಯಕವಾದ ಕರ್ಮವಾಗಿದೆ. ನಾವು ಇಲ್‌ತಿಕಾಫ್‌ನ ಮುಖಾಂತರ ವರ್ಷದಲ್ಲಿ ಕೆಲವು ದಿವಸಗಳ ಕಾಲ ಇತರ ಭೌತಿಕ ವಿಚಾರಗಳನ್ನು ದೂರ ಸರಿಸಿ ದೇವಸ್ಮರಣೆಯೆಡೆಗೆ ಗಮನ ಕೇಂದ್ರೀಕರಿಸುತ್ತೇವೆ.

ಇಲ್‌ತಿಕಾಫ್ ಅತೀ ಮುಖ್ಯವಾದ ಒಂದು ಸುನ್ನತ್ (ಐಚ್ಛಿಕ ಕರ್ಮ) ಆಗಿದೆ. ಸೃಷ್ಟಿಕರ್ತನು ರಕ್ಷಕ ಪ್ರಭುವಾದ ಅಲ್ಲಾಹನ ಪ್ರೀತಿ ಮತ್ತು ಸಾಮೀಪ್ಯದ ಆಕಾಂಕ್ಷೆಯಿಂದ ಭಕ್ತಿಪೂರ್ವಕ ಮಸೀದಿಯಲ್ಲಿ ವಾಸಿಸುವುದನ್ನು 'ಇಲ್‌ತಿಕಾಫ್' ಎಂದು ಹೇಳುವುದು. ಪ್ರವಾದಿವರ್ಯರು(ಸ) ಪ್ರತಿಯೊಂದು ರಮಝಾನ್‌ನಲ್ಲಿ ಹತ್ತು ದಿವಸಗಳ ಕಾಲ ಇಲ್‌ತಿಕಾಫನ್ನು ಆಚರಿಸುತ್ತಿದ್ದರೆಂದು ಅವರು ನಿಧನರಾದ ವರ್ಷ 20 ದಿವಸ ಇಲ್‌ತಿಕಾಫ್ ಆಚರಿಸಿದ್ದಾರೆಂದು (ಹದೀಸ್) ವರದಿಯಾಗಿದೆ. ಪ್ರವಾದಿವರ್ಯರ(ಸ) ಜೊತೆ ಮತ್ತು ಅವರ ನಿಧನಾನಂತರವೂ ಅವರ ಪತ್ನಿಯರು ಮತ್ತು ಸಹಾಬಿಗಳು ಇಲ್‌ತಿಕಾಫ್ ಆಚರಿಸುತ್ತಿದ್ದರು.

ನಿಯ್ಯತ್ (ಸಂಕಲ್ಪ), ಮಸೀದಿಯಲ್ಲಿರುವುದು, ಮಸೀದಿಯಿಂದ ಹೊರಗೆ ಹೋಗದಿರುವುದು. ದೊಡ್ಡ ಅಶುದ್ಧಿಯಿಂದ ಮುಕ್ತರಾಗಿರುವುದು ಮುಂತಾದುವು ಇಲ್‌ತಿಕಾಫ್‌ನ

ನಿಯಮಗಳಾಗಿವೆ. ಇಲ್‌ತಿಕಾಫ್ ಆಚರಿಸುವವನು ಪವಿತ್ರ ಕುರ್‌ಆನ್ ಹದೀಸ್ ಅಧ್ಯಯನ, ಪಾರಾಯಣ, ಜ್ಞಾನ ಸಂಪಾದನೆ, ದಿಕ್ರ್‌ಗಳು, ಪಾಪ ವಿಮೋಚನಾ ಪ್ರಾರ್ಥನೆ, ಸುನ್ನತ್ ನಮಾಝ್ ಮುಂತಾದ ಆರಾಧನೆಗಳಲ್ಲಿ ತೊಡಗಿಸಿಕೊಳ್ಳಬೇಕಾಗಿದೆ.

## ನಾವೇನು ಕಲಿತೆವು

1. ಇಲ್‌ತಿಕಾಫ್ ಅತಿ ಮುಖ್ಯ ಸುನ್ನತ್ತಾಗಿದೆ.
2. ರಮಝಾನ್‌ನ ಕೊನೆಯ ಹತ್ತು ದಿವಸಗಳಲ್ಲಿ ಇಲ್‌ತಿಕಾಫ್ ಕೂರುವುದು ದೇವನ ಪ್ರತಿಫಲ ಪಡೆಯಲು ಸಹಕಾರಿಯಾಗಿದೆ.
3. ಮಹಿಳೆಯರೂ ಇಲ್‌ತಿಕಾಫ್ ಆಚರಿಸಬಹುದಾಗಿದೆ.

## ಅಭ್ಯಾಸ

1. ಇಲ್‌ತಿಕಾಫ್ ಎಂದರೇನು?
2. ಇಲ್‌ತಿಕಾಫ್‌ನ ನಿಯಮಗಳೇನು?
3. ಇಲ್‌ತಿಕಾಫ್ ಆಚರಿಸುವವನು ಏನು ಮಾಡಬೇಕು?

## ಪಾಠ-12

# ಹಜ್ಜ

## اَلْحَجّ

ಇಸ್ಲಾಮಿನ ಮೂಲಭೂತ ಆರಾಧನೆಗಳಲ್ಲಿ ಹಜ್ಜ್‌ಗೆ ಪ್ರಮುಖ ಸ್ಥಾನವಿದೆ. ಹಜ್ಜ್ ಕರ್ಮವು ಅಲ್ಲಾಹನ ಆದೇಶದಂತೆ ಕಅಬಾ ಭವನ ನಿರ್ಮಿಸಿರುವ ಪ್ರವಾದಿ ಇಬ್ರಾಹೀಮ್(ಅ) ಮತ್ತು ಅವರ ಪುತ್ರ ಪ್ರವಾದಿ ಇಸ್ಮಾಈಲ್(ಅ) ಹಾಗೂ ಪ್ರವಾದಿ ಇಬ್ರಾಹೀಮರ ಪತ್ನಿ ಹಾಜಿರಾ(ರ) ಅಂತಿಮ ಪ್ರವಾದಿ ಮುಹಮ್ಮದ್(ಸ) ಹಾಗೂ ಸಹಾಬಿಗಳೆಲ್ಲರ ಐತಿಹಾಸಿಕ ಸ್ಮರಣೆಯನ್ನು ಹುಟ್ಟಿಸುತ್ತದೆ ಹಾಗೂ ಹಜ್ಜ್ ನೆರವೇರಿಸುವ ಸ್ಥಳಗಳು ಕೂಡಾ ಇದೇ ಸ್ಮರಣೆಯನ್ನು ನೆನಪಿಸುತ್ತದೆ. ಹಜ್ಜ್ ಇಸ್ಲಾಮಿ ಐಕ್ಯ ಮತ್ತು ಸಹೋದರತೆಯನ್ನು ಪ್ರತಿಪಾದಿಸುವ ಮಹಾನ್ ಕರ್ಮವಾಗಿದೆ.

**ಕಅಬ**

ನಾಲ್ಕು ಸಾವಿರಕ್ಕೂ ಅಧಿಕ ವರ್ಷಗಳ ಹಿಂದೆ ಪ್ರವಾದಿ ಇಬ್ರಾಹೀಮ್(ಅ) ಮಕ್ಕಾದಲ್ಲಿ ನಿರ್ಮಿಸಿದ ದೇವಭವನವಾಗಿದೆ ಕಅಬಾ. ಜನರು ಏಕದೇವನಾದ ಅಲ್ಲಾಹನ ಆರಾಧನೆ ನಡೆಸುವುದಕ್ಕಾಗಿ ಜಗತ್ತಿನಲ್ಲಿ ಪ್ರಪ್ರಥಮವಾಗಿ ನಿರ್ಮಿಸಿದ ಭವನವಾಗಿದೆ ಎಂದು ಪವಿತ್ರ ಕುರ್‌ಆನ್‌ನಿಂದ ಅರ್ಥೈಸಿಕೊಳ್ಳಬಹುದಾಗಿದೆ. ಜಗತ್ತಿನ ಎಲ್ಲ ಭಾಗ ದಲ್ಲಿರುವ ಮುಸ್ಲಿಮರು ಕಅಬಾದತ್ತ ತಿರುಗಿ (ಮುಖ ಮಾಡಿ) ನಮಾಝ್ ನಿರ್ವಹಿಸುತ್ತಾರೆ. ಹಜ್ಜ್ ಎಂಬುದು ಕಅಬಾ ಇರುವ ಪವಿತ್ರ ಭೂಮಿಗೆ ಹೋಗಿ ನಿರ್ವಹಿಸುವ ಆರಾಧನಾ ಕರ್ಮವಾಗಿದೆ.

ಆರ್ಥಿಕವಾಗಿ ಮತ್ತು ಶಾರೀರಿಕವಾಗಿ ಸಮರ್ಥರಿರುವ ಎಲ್ಲ ಮುಸ್ಲಿಮ್ ಸ್ತ್ರೀ ಪುರುಷರು ಜೀವನದಲ್ಲಿ ಒಮ್ಮೆ ಹಜ್ಜ್ ನಿರ್ವಹಿಸುವುದು ಕಡ್ಡಾಯವಾಗಿದೆ.

ಅಲ್ಲಾಹನು ಹೇಳುತ್ತಾನೆ:

وَلِلّٰهِ عَلَى النَّاسِ حِجُّ الْبَيْتِ مَنِ اسْتَطَاعَ اِلَيْهِ سَبِيلًا (آل عمران)

"ಈ ಪರಿಶುದ್ಧ ಭವನದೆಡೆಗೆ ತಲಪಲು ಸಾಧನಾನುಕೂಲತೆಗಳಿರುವವನು ಅದರ ಅದರ 'ಹಜ್ಜ್' ಯಾತ್ರೆ ಕೈಗೊಳ್ಳಬೇಕೆಂಬುದು ಜನರ ಮೇಲೆ ಅಲ್ಲಾಹನ ಹಕ್ಕಾಗಿರುತ್ತದೆ."
(ಅಲಿ ಇಮ್ರಾನ್-97)

ಅಶ್ಲೀಲ ಮತ್ತು ಪಾಪ ಕರ್ಮಗಳನ್ನು ಮಾಡದೆ ಓರ್ವನು ಪವಿತ್ರವಾದ ಹಜ್ಜನ್ನು ನಿರ್ವಹಿಸಿದರೆ, ತನ್ನ ತಾಯಿ ಹೆತ್ತ ದಿವಸದಂತೆ ಪಾಪ ರಹಿತನಾಗಿ ಮರಳುವನೆಂದು ಪ್ರವಾದಿವರ್ಯರು(ಸ) ಹೇಳಿದ್ದಾರೆ.

ಶವ್ವಾಲ್, ದುಲ್‌ಕಅದ್, ದುಲ್‌ಹಜ್ಜ್ ಎಂಬವು ಹಜ್ಜ್ ಮಾಸಗಳಾಗಿ ಲೆಕ್ಕ ಮಾಡಲಾಗಿದೆ. ಅಂದರೆ ದುಲ್‌ಹಜ್ಜ್ ಮಾಸದ 8ರಿಂದ 13ರಂದು ಹಜ್ಜ್‌ನ ಮುಖ್ಯ ಕರ್ಮಗಳನ್ನು ನಿರ್ವಹಿಸಲಾಗುತ್ತದೆ. ಕಅಬಾದ ಬಳಿ ಮಕ್ಕಾದ ಪರಿಸರದಲ್ಲಿ ಕೆಲವು ನಿಗದಿತ ಸ್ಥಳಗಳಲ್ಲಿ ಹಜ್ಜ್‌ನ ವಿವಿಧ ಕರ್ಮಗಳನ್ನು ನಿರ್ವಹಿಸಲಾಗುತ್ತದೆ.

### ನಾವೇನು ಕಲಿತೆವು

1. ಶಾರೀರಿಕ ಮತ್ತು ಆರ್ಥಿಕ ಸಾಮರ್ಥ್ಯವಿರುವವರಿಗೆ ಹಜ್ಜ್ ಕಡ್ಡಾಯವಾಗಿದೆ
2. ದುಲ್‌ಹಜ್ಜ್ 8ರಿಂದ 13ರ ವರೆಗಿನ ದಿವಸಗಳಲ್ಲಿ ಹಜ್ಜ್ ಮುಖ್ಯ ಕರ್ಮಗಳನ್ನು ನಿರ್ವಹಿಸಲಾಗುತ್ತದೆ.

### ಅಭ್ಯಾಸ

**A. ಉತ್ತರ ಬರೆಯಿರಿ**

1. ಹಜ್ಜ್ ಕರ್ಮಗಳನ್ನು ಎಲ್ಲಿ ನಿರ್ವಹಿಸಲಾಗುವುದು?
2. ಪವಿತ್ರ ಹಜ್ಜ್ ಪ್ರತಿಫಲದ ಕುರಿತು ಪ್ರವಾದಿವರ್ಯರು(ಸ) ಏನು ಹೇಳಿದ್ದಾರೆ?

**B. ಬಿಟ್ಟ ಸ್ಥಳ ತುಂಬಿರಿ**

1. وَلِلّٰهِ عَلَى النَّاسِ .................................................. سَبِيلًا
2. ಹಜ್ಜ್ ಎಂಬುದು ಇಸ್ಲಾಮಿ ಐಕ್ಯ .............................. ಕರ್ಮ ಮಾಡಿ.

ಪಾಠ-13

# ಹಜ್ಜ್‌ನ ಕಡ್ಡಾಯ ವಿಧಿಗಳು

## أَرْكَانُ الْحَجِّ

ಹಜ್ಜ್‌ನಲ್ಲಿ ಪ್ರಮುಖವಾದ ನಾಲ್ಕು ಘಟ್ಟಗಳಿವೆ. ಇದಕ್ಕೆ ಅರ್ಕಾನುಲ್ ಹಜ್ಜ್(ಹಜ್ಜ್ ಕಡ್ಡಾಯ ವಿಧಿ ವಿಧಾನಗಳು) ಎನ್ನುತ್ತೇವೆ. ಇವುಗಳಲ್ಲಿ ಯಾವುದಾದರೊಂದು ಬಾಕಿಯಾದರೆ ಹಜ್ಜ್ ಸಿಂಧುವಾಗುವುದಿಲ್ಲ.

1. ಇಹ್ರಾಮ್ 2. ತವಾಫ್ 3. ಸಅ್‌ಯ್ 4. ಅರಫಾದಲ್ಲಿ ನಿಲ್ಲುವುದು. ಆ ಪ್ರಮುಖ ನಾಲ್ಕು ಘಟ್ಟಗಳಾಗಿವೆ. ಇವುಗಳಲ್ಲಿ ಅರಫಾದಲ್ಲಿ ನಿಲ್ಲುವುದನ್ನು ಬಿಟ್ಟರೆ ಉಳಿದ ಮೂರು ಉಮ್ರಾ ನಿರ್ವಹಿಸುವ ರುಕೂಅ್(ವಿಧಿ)ಗಳಾಗಿವೆ.

### ಇಹ್ರಾಮ್

ಹಜ್ಜ್ ಉಮ್ರಾಗಳ ಪ್ರಥಮ ಘಟ್ಟ ಇಹ್ರಾಮ್ ಆಗಿದೆ. ನಿಯ್ಯತ್(ಸಂಕಲ್ಪ)ನೊಂದಿಗೆ ಹಜ್ಜ್ ಅಥವಾ ಉಮ್ರಾಕ್ಕೆ ಪ್ರವೇಶಿಸುವುದನ್ನು ಇಹ್ರಾಮ್ ಎನ್ನಲಾಗುವುದು. ಅಲ್ಲಾಹನ ತೃಪ್ತಿ(ಪ್ರೀತಿ)ಯನ್ನು ಮಾತ್ರ ಬಯಸಿ ದೇವ ಭವನದಲ್ಲಿ ವಿಶೇಷವಾದ ಆರಾಧನಾ ಕರ್ಮಗಳನ್ನು ನಿರ್ವಹಿಸುವುದಕ್ಕಾಗಿ ಬೇರೆಲ್ಲಿ ಭೌತಿಕ ಕಾರ್ಯಗಳಿಂದ ದೂರವಿರುವುದಕ್ಕೆ ಇಹ್ರಾಮ್ ಎಂದು ಹೆಸರು.

ಹಜ್ಜ್ ಮತ್ತು ಉಮ್ರಾ ಒಟ್ಟಾಗಿ ಮತ್ತು ಬೇರೆ ಬೇರೆಯಾಗಿಯೂ ಇಹ್ರಾಮ್ ಮಾಡಬಹುದಾಗಿದೆ. ಇಹ್ರಾಮ್ ಧರಿಸುವುದಕ್ಕೆ ಪ್ರತ್ಯೇಕ ಸ್ಥಳಗಳು ನಿರ್ಣಯಿಸಲ್ಪಟ್ಟಿದೆ. ಇದಕ್ಕೆ ಮೀಕಾತ್ ಎಂದು ಹೇಳುತ್ತಾರೆ. ಹಜ್ಜ್ ಮತ್ತು ಉಮ್ರಾಗಳನ್ನು ಉದ್ದೇಶವಿಟ್ಟು ಕೊಂಡವರು ಈ ಸ್ಥಳಗಳಿಗೆ ತಲಪಿ ಅದರ ಮುಂದೆ ಹಾದು ಹೋಗುವಾಗ ಇಹ್ರಾಮ್‌ನಲ್ಲಿರ ಬೇಕಾಗಿದೆ. ನಮ್ಮ ಊರಿನಿಂದ ಹೋಗುವವರ ಮೀಕಾತ್ 'ಯಲಂ' ಲಂ ಎಂಬ ಸ್ಥಳವಾಗಿದೆ. ಸ್ನಾನ ಮಾಡಿ ಎರಡು ರಕಅತ್ ಸುನ್ನತ್ ನಮಾಝ್ ಮಾಡಿದ ಬಳಿಕ ಇಹ್ರಾಮ್ ಧರಿಸಬೇಕಾಗಿದೆ.

### ಇಹ್ರಾಮಿನಲ್ಲಿ ನಿಷಿದ್ಧ ಕಾರ್ಯಗಳು

ಇಹ್ರಾಮ್ ಧರಿಸುವುದರೊಂದಿಗೆ ಪುರುಷರು ತಲೆ ಮುಚ್ಚಬಾರದು. ಹೊಲಿದ ವಸ್ತ್ರಗಳನ್ನು ಧರಿಸಬಾರದು. ಹೊಲಿಯದ ಎರಡು ವಸ್ತ್ರಗಳನ್ನು ಮಾತ್ರವೇ ಪುರುಷರು

ಧರಿಸಬೇಕಾಗಿದೆ. ಒಂದನ್ನು ಧರಿಸುವುದು ಇನ್ನೊಂದನ್ನು ಹೊದಿಯಬೇಕು. ಮಹಿಳೆಯರು ಮುಖ ಮುಂಗೈಗಳನ್ನು ಹೊರತು ಉಳಿದ ಭಾಗಗಳನ್ನು ಮುಚ್ಚಿಕೊಳ್ಳುವ ಬಟ್ಟೆಯನ್ನು ಧರಿಸಬೇಕಾಗಿದೆ. ಇಹ್ರಾಮ್ ಧರಿಸಿದ (ಪ್ರವೇಶಿಸಿದ) ನಂತರ ಸ್ತ್ರೀ ಪುರುಷರ ನಡುವೆ ಸಂಪರ್ಕ, ವಿವಾಹ, ಭೇಟಿ ಮಾಡುವುದು ನಿಷಿದ್ಧವಾಗಿದೆ.

### ತಲ್‌ಬಿಯತ್

ಇಹ್ರಾಮಿನಲ್ಲಿ ಪ್ರವೇಶಿಸಿದೊಡನೆ ಧಾರಾಳವಾಗಿ ತಲ್‌ಬಿಯತ್ ಹೇಳುವುದು ಸುನ್ನತ್ತಾಗಿದೆ.

لَبَّيْكَ اللّٰهُمَّ لَبَّيْكَ لَبَّيْكَ لَا شَرِيكَ لَكَ لَبَّيْكَ، إِنَّ الْحَمْدَ وَالنِّعْمَةَ لَكَ وَالْمُلْكَ، لَا شَرِيكَ لَكَ

"ಅಲ್ಲಾಹನೇ! ಇದೋ ನಿನ್ನ ಕರೆಗೆ ಓಗೊಡುತ್ತಿದ್ದೇನೆ. ನಾನಿದೋ ಓಗೊಡುತ್ತಿದ್ದೇನೆ. ನಾನು ಓಗೊಟ್ಟಿರುವೆನು. ನಿನಗೆ ಯಾರೂ ಭಾಗೀದಾರರಿಲ್ಲ. ನಾನು ಓಗೊಟ್ಟಿರುವೆನು. ಎಲ್ಲ ಸ್ತುತಿಯು ನಿನಗೇ ಮೀಸಲು, ಅನುಗ್ರಹ ನಿನ್ನದು ಮಾತ್ರವಾಗಿದೆ. ಅಧಿಕಾರ ನಿನಗೆ ಮಾತ್ರವಾಗಿದೆ. ನಿನಗೆ ಭಾಗೀದಾರರಿಲ್ಲ." ಇದನ್ನು ತಲ್‌ಬಿಯತ್ ಎಂದು ಕರೆಯುತ್ತೇವೆ.

### ನಾವೇನು ಕಲಿತೆವು

1. ಹಜ್ಜ್‌ಗೆ 4 ರುಕ್ನ್‌ಗಳಿವೆ. ಅದರಲ್ಲಿ ಯಾವುದಾದರೊಂದು ಬಿಟ್ಟು ಹೋದರೆ ಹಜ್ಜ್ ಸಿಂಧುವಾಗುವುದಿಲ್ಲ.
2. ಇಹ್ರಾಮ್‌ಗೆ ಪ್ರತ್ಯೇಕ ಸ್ಥಳಗಳನ್ನು ನಿಗದಿಪಡಿಸಲಾಗಿದೆ.
3. ಇಹ್ರಾಮ್‌ನಲ್ಲಿ ಪುರುಷರು ಹೊಲಿಯದ ಎರಡು ವಸ್ತ್ರಗಳನ್ನು ಮಾತ್ರವೇ ಧರಿಸಬೇಕು.

### ಅಭ್ಯಾಸ

1. ಹಜ್ಜ್‌ನ ರುಕ್ನ್‌ಗಳು ಯಾವುವು?
2. ಇಹ್ರಾಮಿನಲ್ಲಿ (ಇಹ್ರಾಮ್‌ಗೆ ಪ್ರವೇಶಿಸಿದ ಮೇಲೆ) ನಿಷಿದ್ಧವಾಗುವ ಕಾರ್ಯಗಳು ಯಾವುವು?
3. ತಲ್‌ಬಿಯತನ್ನು ಅರ್ಥ ಸಹಿತ ಹೇಳಿ.

## ಪಾಠ-14

# ತವಾಫ್ ಮತ್ತು ಸಅ್‌ಯ್

# اَلطَّوَافُ وَالسَّعْيُ

### ತವಾಫ್

ಇದು ಹಜ್ಜ್ ಅಥವಾ ಉಮ್ರಾ ನಿರ್ವಹಿಸುವುದಕ್ಕಾಗಿ ಇಹ್ರಾಮ್ ಧರಿಸಿದ ಮಕ್ಕಾಕ್ಕೆ ತಲುಪಿದ ಮೇಲೆ ಪ್ರಪ್ರಥಮವಾಗಿ ಮಾಡುವ ಕರ್ಮವಾಗಿರುತ್ತದೆ. ಪವಿತ್ರ ಕಅಬಾ ಪ್ರದಕ್ಷಿಣೆ ಮಾಡುವುದನ್ನು ತವಾಫ್ ಎನ್ನಲಾಗುತ್ತದೆ.

ಮಾನವ ಜೀವನ ಏಕದೇವ ವಿಶ್ವಾಸದಲ್ಲಿ ಕೇಂದ್ರೀಕರಿಸಲಾಗಿದೆಯೆಂಬುದು ಕಅಬಾವನ್ನು ಕೇಂದ್ರವಾಗಿರಿಸಿ ನಡೆಸುವ ಪ್ರದಕ್ಷಿಣೆಯಲ್ಲಿ ಅಡಕವಾಗಿದೆ. ಹಜರುಲ್ ಅಸ್ವದ್‌ನ ಸಮೀಪದಿಂದ ಪ್ರಾರಂಭಿಸಿ ಕಅಬಾವನ್ನು ಎಡಭಾಗವಾಗಿಟ್ಟು 7 ಬಾರಿ ಪ್ರದಕ್ಷಿಣೆ ನಡೆಸಬೇಕು. ಇಹ್ರಾಮ್ ಧರಿಸಿದ ನಂತರ ಪ್ರಥಮವಾಗಿ ನಡೆಸುವ ತವಾಫನ್ನು (ತವಾಫುಲ್ ಕುದೂಮ್) (طَوَافُ الْقُدُوم) ಎಂದು ಹೇಳುತ್ತಾರೆ.

ತವಾಫ್ ಸರಿಯಾಗಿ ಮಾಡುವುದಕ್ಕೆ ಕೆಲವು ನಿಬಂಧನೆ(شرط)ಗಳಿವೆ. ಅವು ಹೀಗಿದೆ

1. ದೊಡ್ಡ ಮತ್ತು ಚಿಕ್ಕದಾದ ಮಾಲಿನ್ಯ(ಅಶುದ್ಧಿ)ಗಳಿಂದ ಶುಚಿಯಾಗಿರುವುದು.

2. ಸ್ತ್ರೀ ಪುರುಷರು ಕಡ್ಡಾಯವಾಗಿ ಮರೆಸಬೇಕಾದ ಶರೀರದ ಅಂಗಾಂಗಗಳನ್ನು ಮರೆಸುವುದು.

3. ಏಳು ಬಾರಿ ಪ್ರದಕ್ಷಿಣೆ(ತವಾಫನ್ನು) ಪೂರ್ಣಗೊಳಿಸುವುದು.

4. ತವಾಫ್ ಮಾಡುವವನ ಎಡಭಾಗದಲ್ಲಿ ಕಅಬಾ ಇರಬೇಕು.

5. ಹಜರಲ್ ಅಸ್ವದ್‌ನ ಎದುರಿಂದ ತವಾಫ್ ಆರಂಭಿಸಿ ಅದರ ಮುಂದೆಯೇ ಕೊನೆಗೊಳಿಸಬೇಕು.

ಹಜರುಲ್ ಅಸ್ವದನ್ನು ಚುಂಬಿಸುವ ಮೂಲಕ, ಅದನ್ನು ಕೈಯಿಂದ ಮುಟ್ಟಿ ಚುಂಬಿಸುವ ಮೂಲಕ ಅಥವಾ ಕೈಯೆತ್ತಿ ಅದರತ್ತ ಸಂಜ್ಞೆ ಮಾಡುವ ಮೂಲಕ

بِسْمِ اللهِ اَللهُ اَكْبَر ಎಂದು ಹೇಳಿ ತವಾಫನ್ನು ಆರಂಭಿಸಬೇಕಾಗಿದೆ. ಹಜ್ಜ್ ಉಮ್ರಾಗಳಲ್ಲದ ಯಾವ ಸಮಯದಲ್ಲಿಯೂ ತವಾಫ್ ಮಾಡುವುದು ಸುನ್ನತ್ತಾಗಿದೆ.

ತವಾಫ್ ಮಾಡುವಾಗ ಪವಿತ್ರ ಕುರ್‌ಆನನ್ನು ಓದುವುದು, ದಿಕ್ರ್ ದುಆಗಳನ್ನು ಹೆಚ್ಚೆಚ್ಚು ಹೇಳುವುದು ಸುನ್ನತ್ತಾಗಿದೆ. ತವಾಫ್ ಆದ ನಂತರ ಪವಿತ್ರವಾದ ಝಮ ಝಮ ನೀರನ್ನು ಕುಡಿಯಬೇಕು. ನಂತರ ಮಕಾಮು ಇಬ್ರಾಹೀಮ್‌ನ ಹಿಂದೆ ನಿಂತು ಎರಡು ರಕಅತ್ ನಮಾಝನ್ನು ನಿರ್ವಹಿಸಿ ಪ್ರಾರ್ಥಿಸಬೇಕಾಗಿದೆ. ಕಅಬಾದ ಬಾಗಿಲಿನ ಮುಂಭಾಗದಲ್ಲಿ ಒಂದು ಗಾಜಿನ ಗೂಡನ್ನು ಕಾಣಬಹುದಾಗಿದೆ. ಪ್ರವಾದಿ ಇಬ್ರಾಹೀಮ್(ಅ) ಪ್ರಾರ್ಥಿಸಿದ ಈ ಸ್ಥಳಕ್ಕೆ ಮಕಾಮು ಇಬ್ರಾಹೀಮ್ ಎಂದು ಹೇಳಲಾಗುತ್ತದೆ ಅವರ ಕಾಲಿನಡಿಯಲ್ಲಿ ಸವೆದಿರುವ ಒಂದು ಕಲ್ಲು ಈ ಗಾಜಿನ ಗೂಡಿನೊಳಗಿದೆ.

## ಸಅ್‌ಯ್ (اَلسَّعْيِ)

ತವಾಫ್(ಕಅಬಾ ಪ್ರದಕ್ಷಿಣೆ) ನಿರ್ವಹಿಸಿದ ಬಳಿಕ ನಿರ್ವಹಿಸುವ ಕರ್ಮವನ್ನು ಸಅ್‌ಯ್ ಎನ್ನುತ್ತಾರೆ. ಮಸ್ಜಿದುಲ್ ಹರಾಮ್‌ನ ತೀರ ಹತ್ತಿರದಲ್ಲಿ ಸಫಾ-ಮರ್ವಾ ಎಂಬ ಎರಡು ಬೆಟ್ಟಗಳಿವೆ. ಆದರೆ ಇಂದು ಅದು ಗುಡ್ಡಗಳಂತೆ ತೋರುವುದಿಲ್ಲ. ಮಸೀದಿಗೆ ಸೇರಿಕೊಂಡಿರುವ ಒಂದು ಕಟ್ಟಡದೊಳಗೆ ನಿಂತಿರುವ ಎರಡು ಬಂಡೆಗಳಾಗಿವೆ. ಸಅ್‌ಯ್ ಎಂದರೆ ಅಲ್ಲಾಹನ ಪ್ರೀತಿ ಮತ್ತು ಅನುಗ್ರಹವನ್ನು ಯಾಚಿಸುತ್ತಾ ಮಾನವರು ಮಾಡುವ ನಿರಂತರ ಪ್ರಯತ್ನದ ಪ್ರತೀಕಗಳಾಗಿವೆ. ಅದು ಯಾವ ರೀತಿ ನಿರ್ವಹಿಸ ಬೇಕೆಂಬುದನ್ನು ಈ ಕೆಳಗೆ ವಿವರಿಸಲಾಗಿದೆ.

ತವಾಫ್‌ನ (ಕಅಬಾ ಪ್ರದಕ್ಷಿಣೆಯ) ಬಳಿಕ ಸುನ್ನತ್(ಐಚ್ಛಿಕ) ನಮಾಝ್, ಪ್ರಾರ್ಥನೆ ಮುಗಿಸಿ ನೇರವಾಗಿ ಸಫಾಕ್ಕೆ ಬಂದು ಅಲ್ಲಿ ಕಅಬಾದ ನೇರಕ್ಕೆ ನಿಂತು ಪ್ರಾರ್ಥಿಸುವುದು. ಆನಂತರ ಮರ್ವಾದೆಡೆಗೆ ನಡೆಯುವುದು. ಹಸಿರು ಕಂಬಗಳಿರುವಲ್ಲಿ ಮೆಲ್ಲನೆ ಓಡಬೇಕಾಗಿದೆ. ಮಹಿಳೆಯರು, ವೃದ್ಧರು, ರೋಗಿಗಳು ಓಡಬೇಕಾಗಿಲ್ಲ. ಮರ್ವಾಕ್ಕೆ ತಲುಪಿ ಸಫಾದಲ್ಲಿ ಮಾಡಿದಂತೆ ಕಅಬಾದ ನೇರಕ್ಕೆ ತಿರುಗಿ ನಿಂತು ಪ್ರಾರ್ಥಿಸಬೇಕಾಗಿದೆ. ಸಫಾದಿಂದ ಮರ್ವಾಕ್ಕೆ ತಲುಪಿದೊಡನೆ ಒಂದು ಸಅ್‌ಯ್ ಪೂರ್ತಿಯಾಯಿತು. ಅಲ್ಲಿಂದ ಮರಳಿ ಸಫಾಕ್ಕೆ ತಲುಪಿದಾಗ ಎರಡು ಸಅ್‌ಯ್ ಪೂರ್ತಿಯಾಯಿತು. ಈ ರೀತಿ ಏಳು ಬಾರಿ ಮಾಡ ಬೇಕಾಗಿದೆ. ಏಳನೇ ಸಲ ಮರ್ವಾದಲ್ಲಿ ಕೊನೆಗೊಳಿಸಬೇಕು. ಹೀಗೆ ನಡೆದು ಹೋಗುವುದರ ಮಧ್ಯೆ ಪವಿತ್ರ ಕುರ್‌ಆನ್ ಪಾರಾಯಣ ಮತ್ತು ದಿಕ್ರ್-ದುಆಗಳನ್ನು ಹೇಳುತ್ತಿರಬೇಕು.

### ನಾವೇನು ಕಲಿತೆವು

1. ತವಾಫ್ ಸಿಂಧುವಾಗಬೇಕಾದರೆ ಅದರ ಶರತ್ತುಗಳು ಪೂರೈಸಿರಬೇಕು.
2. ತವಾಫ್ ಹಜರುಲ್ ಅಸ್ವದ್‌ನ ಎದುರಿನಿಂದ ಪ್ರಾರಂಭಿಸಬೇಕು.
3. ತವಾಫ್, ಸಅ್‌ಯ್‌ಗಳನ್ನು ತಲಾ ಏಳು ಬಾರಿ ಮಾಡಬೇಕು.

ಅಭ್ಯಾಸ

1. ತವಾಫ್‌ನ ಶರತ್ತುಗಳು ಯಾವುವು?
2. ತವಾಫುಲ್ ಕುದೂಮ್ ಎಂದರೇನು?
3. ತವಾಫನ್ನು ಹೇಗೆ ಪ್ರಾರಂಭಿಸಬೇಕು?
4. ಸಲ್‌ಯ್ ಎಲ್ಲಿಂದ ಪ್ರಾರಂಭಿಸಬೇಕು?
5. ತವಾಫ್ ಮತ್ತು ಸಲ್‌ಯ್‌ಗಳಲ್ಲಿ ಏನು ಹೇಳಬೇಕು?

## ಪಾಠ-15

# ಅರಫಾದಲ್ಲಿ ನಿಲ್ಲುವುದು

## اَلْوُقُوفُ بِعَرَفَة

ಅರಫಾದಲ್ಲಿ ನಿಲ್ಲುವುದು ಹಜ್ಜ್‌ನ ಅತ್ಯಂತ ಪ್ರಮುಖ ಕರ್ಮವಾಗಿದೆ. ಅದು ಹಜ್ಜ್‌ನ ರುಕ್ನ್‌ಗಳಲ್ಲಿ ಸೇರಿದೆ ಎಂದು ನಾವು ಕಲಿತಿದ್ದೇವೆಯಲ್ಲವೇ? ದುಲ್‌ಹಜ್ಜ್ ತಿಂಗಳು 9ನೇ ದಿವಸ ಝುಹ್ರ್ ನಮಾಝ್‌ನ ನಂತರದಿಂದ ಸೂರ್ಯಾಸ್ತಮಾನದ ವರೆಗೆ ಅರಫಾದಲ್ಲಿ ನಿಲ್ಲಬೇಕಾಗಿದೆ. ಈ ಸಮಯಾವಧಿಯಲ್ಲಿ ಅಲ್ಪಕಾಲವಾದರೂ ಓರ್ವನಿಗೆ ಅರಫಾದಲ್ಲಿ ನಿಲ್ಲುವುದಕ್ಕೆ ಸಾಧ್ಯವಾಗದಿದ್ದರೆ ಅವನಿಗೆ ಹಜ್ಜ್ ಲಭಿಸದು. ಝುಹ್ರ್‌ನ ಮೊದಲು ಅರಫಾ ಮಸ್ಜಿದುನ್ನಮಿರದಲ್ಲಿ ಇಮಾಮ್ ಜನರಿಗೆ ಪ್ರವಚನ ನೀಡುವರು. ಆನಂತರ ಝುಹ್ರ್ ಮತ್ತು ಅಸರ್ ನಮಾಝುನ್ನು ಒಟ್ಟಿಗೆ ಸೇರಿಸಿ ಜಮ್‌ಅ್ ಕಸ್ರ್ ಮಾಡಿ ನಮಾಝ್ ನಿರ್ವಹಿಸಬೇಕಾಗಿದೆ. ಸಾಮರ್ಥ್ಯ ಮತ್ತು ಸೌಕರ್ಯಗಳನ್ನು ಹೊಂದಿರುವವರು ಮಸೀದಿಯಲ್ಲಿ ನಡೆಯುವ ಜಮಾಅತ್‌ನಲ್ಲಿ ಭಾಗವಹಿಸುವುದು ಉತ್ತಮವಾಗಿದೆ. ಸೌಕರ್ಯವಿಲ್ಲದವರು ತಮ್ಮ ಟೆಂಟುಗಳಲ್ಲಿ ಈ ರೀತಿ ಜಮ್‌ಅ್ ಕಸ್ರ್ ಮಾಡಿ ನಮಾಝುನ್ನು ನಿರ್ವಹಿಸಬೇಕಾಗಿದೆ.

ಅರಫಾದ ಯಾವ ಭಾಗದಲ್ಲಿಯೂ ನಿಲ್ಲಬಹುದಾಗಿದೆ. ಅರಫಾಕ್ಕೆ ಸೇರದ ಸ್ಥಳಗಳನ್ನು ಗುರುತಿಸಿಡಲಾಗಿದೆ. ಅಲ್ಲಿ ನಿಲ್ಲಬಾರದು. ಅರಫಾದಲ್ಲಿ ನಿಲ್ಲಬಹುದು, ಕುಳಿತುಕೊಳ್ಳಬಹುದು ಮಲಗಬಹುದಾಗಿದೆ. ಸುನ್ನತ್ ನಮಾಝ್, ಪವಿತ್ರ ಕುರ್‌ಆನ್ ಪಾರಾಯಣ, ತಲ್ಬಿಯತ್, ದಿಕ್ರ್, ದುಆಗಳನ್ನು(ಪ್ರಾರ್ಥನೆಗಳು) ಹೆಚ್ಚೆಚ್ಚು ಮಾಡಬೇಕಾಗಿದೆ. ಪ್ರಾರ್ಥಿಸುವಾಗ ಕಿಬ್ಲಾದ ನೇರಕ್ಕೆ ತಿರುಗಿ ನಿಂತು ಕೈಗಳನ್ನೆತ್ತುವುದು ಸುನ್ನತ್ ಆಗಿದೆ. ಅಂತ್ಯ ದಿವಸ ಮಾನವರೆಲ್ಲರೂ ಅಲ್ಲಾಹನ ಮುಂದೆ ಹಾಜರಾಗಲಿರುವ ಮಹ್‌ಶರಾವನ್ನು ಹಜ್ಜ್ ನೆರವೇರಿಸಲೆಂದು ಸೇರುವ ಲಕ್ಷಾಂತರ ಮಂದಿ ಒಂದೆಡೆ ಸೇರುವ ಅರಫಾವು ನೆನಪಿಗೆ ತರುತ್ತದೆ.

ಸೂರ್ಯಾಸ್ತಮಾನದ ವರೆಗೂ ಹೀಗೆ ಇದ್ದು ಸೂರ್ಯಾಸ್ತಮಾನವಾದ ನಂತರ ಮುಝ್ದಲಿಫಾಕ್ಕೆ ಹೊರಡಬೇಕಾಗಿದೆ. ಅರಫಾ ಮತ್ತು ಮಿನಾದ ನಡುವೆಯಿರುವ ಒಂದು

ಕಣಿವೆ ಭಾಗವನ್ನು ಮಿನಾ ಎನ್ನಲಾಗುತ್ತದೆ. ಮಶ್‌ಅರುಲ್ ಹರಾಂ ಎಂಬ ಹೆಸರಿನ ಒಂದು ಮಸೀದಿ ಇಲ್ಲಿದೆ. ಮಗ್ರಿಬ್, ಇಶಾ ನಮಾಝನ್ನು ಇಲ್ಲಿ ಜಮ್‌ಅ್ ಕಸ್ರ್ ಮಾಡಿ ನಿರ್ವಹಿಸಿ, ಪ್ರಭಾತದ ವರೆಗೂ ಇಲ್ಲಿ ನೆಲೆಸಬೇಕಾಗಿದೆ.

### ನಾವೇನು ಕಲಿತೆವು

1. ದುಲ್‌ಹಜ್ಜ್ 9ನೇ ದಿವಸ ಮಧ್ಯಾಹ್ನದಿಂದ ಅರಫಾದಲ್ಲಿ ನಿಲ್ಲಬೇಕಾಗಿದೆ.
2. ಅರಫಾದ ಮೇರೆಗಳ ಹೊರಗೆ ನಿಂತರೆ ಹಜ್ಜ್ ಸಿಂಧುವಾಗುವುದಿಲ್ಲ.
3. ಅರಫಾದಲ್ಲಿ ಝುಹ್ರ್ ಮತ್ತು ಅಸರ್ ನಮಾಝನ್ನು ಜಮ್‌ಅ್ ಕಸ್ರ್ ಮಾಡಿ ನಿರ್ವಹಿಸಬೇಕಾಗಿದೆ.
4. ಅರಫಾದಲ್ಲಿ ಪ್ರಾರ್ಥನೆಗಳು, ಪವಿತ್ರ ಕುರ್‌ಆನ್ ಪಾರಾಯಣ, ಸುನ್ನತ್ (ಐಚ್ಛಿಕ) ನಮಾಝ್‌ಗಳಲ್ಲಿ ನಿರತರಾಗಬೇಕಾಗಿದೆ.

### ಅಭ್ಯಾಸ

1. ಅರಫಾದಲ್ಲಿ ಯಾವಾಗ ನಿಲ್ಲಬೇಕು.
2. ಅರಫಾದಲ್ಲಿ ನಿಲ್ಲುವುದರ ಪ್ರಾಮುಖ್ಯತೆಯನ್ನು ಸ್ಪಷ್ಟಪಡಿಸಿರಿ.
3. ಅರಫಾದಲ್ಲಿ ಏನು ಮಾಡಬೇಕು.

## ಪಾಠ-16

# ಹಜ್ಜ್‌ನ ಸ್ವರೂಪ

# كَيْفِيَّةُ الْحَجِّ

ಹಜ್ಜ್‌ಗೆ ಇಹ್ರಾಮ್ ಧರಿಸಿ ದುಲ್‌ಹಜ್ಜ್ 8ರಂದು ಬೆಳಗಾತ 'ಮಿನಾ'ಕ್ಕೆ ಹೊರಡುವುದರೊಂದಿಗೆ ಹಜ್ಜ್ ಕರ್ಮಗಳು ಆರಂಭವಾಗುವುದು. ಈ ದಿವಸಕ್ಕೆ ಯೌಮುತ್ತರ್‌ವೀಯತ್ ಎಂದು ಹೇಳಲಾಗುವುದು. ಅಂದು ಹಗಲು ರಾತ್ರಿ ವೇಳೆ ಮಿನಾದಲ್ಲಿ ವಾಸಿಸುವುದು ಸುನ್ನತ್(ಐಚ್ಛಿಕ) ಆಗಿದೆ. ಮಿನಾದಲ್ಲಿ ಎಲ್ಲ ನಮಾಝುನ್ನು ಅವುಗಳ ಸಮಯದಲ್ಲಿ ಕಸ್ರ್ ಮಾಡಿ ನಿರ್ವಹಿಸಬೇಕಾಗಿದೆ.

ದುಲ್‌ಹಜ್ಜ್ 9ರಂದು ಸೂರ್ಯೋದಯವಾಗುವುದರೊಂದಿಗೆ 'ಅರಫಾ'ದತ್ತ ಹೊರಡಬೇಕು. ಅರಫಾವು ಮಿನಾದಿಂದ ಸುಮಾರು 16 ಕಿ.ಮೀ ದೂರವಿರುವ ಒಂದು ಸ್ಥಳವಾಗಿದೆ. ಅರಫಾದಲ್ಲಿ ನಿಲ್ಲುವುದು ಹಜ್ಜ್‌ನ ಅತ್ಯಂತ ಪ್ರಮುಖ ಕರ್ಮವಾಗಿದೆ. ಮಧ್ಯಾಹ್ನದಿಂದ ಸೂರ್ಯಾಸ್ತಮಾನದವರೆಗೆ ಅರಫಾದಲ್ಲಿ ನಿಲ್ಲಬೇಕಾಗಿದೆ. ಸೂರ್ಯ ಅಸ್ತಮಾನವಾದ ನಂತರ ಮುಝ್ದಲಿಫಾಕ್ಕೆ ಹೊರಟು ರಾತ್ರಿಯನ್ನು ಅಲ್ಲಿ ಕಳೆಯಬೇಕಾಗಿದೆ. ಈ ಸ್ಥಳಗಳೆಲ್ಲ ತಲ್‌ಬಿಯತ್, ದಿಕ್ರ್, ದುಆಗಳನ್ನು ಅಧಿಕಗೊಳಿಸಬೇಕಾಗಿದೆ. ಪ್ರಭಾತದ (ಫಜ್ರ್) ನಮಾಝ್‌ನ ನಂತರ ಸೂರ್ಯೋದಯಕ್ಕಿಂತ ಮುಂಚಿತವಾಗಿ ಮುಝ್ದಲಿಫಾದಿಂದ ಮಿನಾದತ್ತ ಹೊರಡಬೇಕು. ಮಹಿಳೆಯರು, ವೃದ್ಧರು, ಅವರ ಸಹಾಯಕರು ಅರ್ಧ ರಾತ್ರಿ ಕಳೆದ ನಂತರದಿಂದಲೇ ಹೊರಡಬಹುದಾಗಿದೆ. ಜಮ್ರಾದಲ್ಲಿ ಎಸೆಯುವ ಏಳು ಚಿಕ್ಕ ಕಲ್ಲುಗಳನ್ನು ಅಲ್ಲಿಂದ ಹೆಕ್ಕಿ ತೆಗೆದುಕೊಳ್ಳಬೇಕು.

ದುಲ್‌ಹಜ್ಜ್ 10ನ್ನು ಯೌಮುನ್ನಹರ್ (يوم النحر) ಎಂದು ಹೇಳುತ್ತಾರೆ. ಈ ದಿವಸ ಮುಝ್ದಲಿಫಾದಿಂದ ಮಿನಾಕ್ಕೆ ಬರುವುದು, ಅಲ್ಲಿ ಇರುವ ಜಮ್ರತುಲ್ ಅಕಬಾದಲ್ಲಿ ಕಲ್ಲುಗಳನ್ನು ಎಸೆಯಬೇಕು. ಕಲ್ಲೆಸೆಯುವ 3 ಸ್ಥಳಗಳಿವೆ ಅವುಗಳನ್ನು ಜಮ್ರಗಳೆಂದು ಕರೆಯಲಾಗುತ್ತದೆ. ಈ ಜಮ್ರಗಳು ಮಿನಾ ಮತ್ತು ಮಕ್ಕಾದ ಮಧ್ಯದಲ್ಲಿವೆ. ಇವುಗಳಲ್ಲಿ ಜಮ್ರತುಲ್ ಅಕಬಾ ಕೊನೆಯದಾಗಿದೆ. ಈ ದಿನದಲ್ಲಿ ಜಮ್ರತುಲ್ ಅಕಬಾದಲ್ಲಿ ಮಾತ್ರ ಕಲ್ಲೆಸೆಯಬೇಕು ಮತ್ತು ತಕ್‌ಬೀರ್ ಹೇಳುತ್ತಾ ಕಲ್ಲೆಸೆಯುವುದು. ಕಲ್ಲುಗಳಿಂದ ನಿರ್ಮಿಸಿರುವ ಒಂದು ಸ್ತೂಪ(ಕಂಬ)ದಂತಿರುವ ಆಕೃತಿಗೆ ತಕ್‌ಬೀರ್ ಹೇಳುತ್ತಾ ಕಲ್ಲೆಸೆಯಬೇಕು. ಆ ನಂತರ ಬಲಿ ಕಡ್ಡಾಯವಾದವರು ಬಲಿ ನೀಡಬೇಕು. ಅದಕ್ಕೆಂದೇ ಪ್ರತ್ಯೇಕ ಸ್ಥಳವನ್ನು

ಮೀಸಲಿಡಲಾಗಿದೆ. ಇಲ್ಲಿ ಅಥವಾ ಸೌಕರ್ಯವಿರುವ ಬೇರೆ ಸ್ಥಳಗಳಲ್ಲಿಯೂ ಬಲಿ ನೀಡಬಹುದಾಗಿದೆ. ಬಲಿ ನೀಡುವುದನ್ನು ಮುಂದಿನ ದಿವಸಕ್ಕೆ ದೂಡಬಹುದು. ಅಥವಾ ಇತರರಿಗೆ ಬಲಿ ನೀಡುವ ಹೊಣೆ ವಹಿಸಿದರೂ ಅಡ್ಡಿಯಿಲ್ಲ.

ಆನಂತರ ಮಕ್ಕಾಕ್ಕೆ ತಲುಪಿ ತವಾಫ್ ಮತ್ತು ಸಅ್‌ಯನ್ನು ನೆರವೇರಿಸಬೇಕು. ತವಾಫ್‌ಗೆ (طَوَافُ الْإِفَاضَةِ) 'ತವಾಫುಲ್ ಇಫಾದ್' ಎಂದು ಹೇಳುವರು. ಈ ತವಾಫ್ ಮತ್ತು ಸಅ್‌ಯ್ ಹಜ್ಜ್‌ನ ಕಡ್ಡಾಯ ಕರ್ಮಗಳಾಗಿವೆ. ಆನಂತರ ತಲೆಗೂದಲು ಕತ್ತರಿಸಬೇಕು. ಪುರುಷರು ಸಂಪೂರ್ಣ ಕೂದಲನ್ನು ಬೋಳಿಸುವುದು ಉತ್ತಮವಾಗಿದೆ. ಮಹಿಳೆಯರು ಕೂದಲಿನ ತುದಿಯಿಂದ ಸ್ವಲ್ಪ ಕತ್ತರಿಸಿದರೆ ಸಾಕಾಗುವುದು. ಇದರೊಂದಿಗೆ ಇಹ್ರಾಮ್‌ನಿಂದ ಹೊರಬಂದ ವಸ್ತು ಇಹ್ರಾಮಿನಲ್ಲಿ ವಿರೋಧಿಸಲ್ಪಟ್ಟ ಸ್ತ್ರೀಪುರುಷರ ಸಂಬಂಧಕ್ಕೆ ಹೊರತಾದ ಎಲ್ಲಾ ಕಾರ್ಯಗಳು ಸಿಂಧುವಾಗುತ್ತದೆ.

ಇದರ ನಂತರ ಮಿನಾಕ್ಕೆ ಮರಳುವುದು. ಮುಂದಿನ ಮೂರು ದಿವಸಗಳನ್ನು ಅಲ್ಲಿ ಕಳೆಯಬೇಕಾಗಿದೆ. ಈ ದಿವಸಗಳಲ್ಲಿ ಝುಹ್ರ್‌ನ ನಂತರ ಮೂರು ಜಮ್ರಾಗಳಲ್ಲಿಯೂ ತಲಾ ಏಳರಂತೆ ಕಲ್ಲುಗಳನ್ನು ಎಸೆಯಬೇಕಾಗಿದೆ. ಕಲ್ಲುಗಳು ಮಿನಾದಲ್ಲಿಯೇ ಸಂಗ್ರಹಿಸಿದರೆ ಒಳ್ಳೆಯದು. ಎಸೆಯುವಲ್ಲಿರುವ ಕಲ್ಲುಗಳನ್ನು ಎತ್ತಿಕೊಳ್ಳಬಾರದು. ದುಲ್‌ಹಜ್ಜ್ 12ರಂದು ಕಲ್ಲೆಸೆತವನ್ನು ನಡೆಸಿದ ಬಳಿಕ ಮರಳಬಹುದು.

ಹಜ್ಜ್ ಪೂರೈಸಿದ ಬಳಿಕ ಊರಿಗೆ ಮರಳುವುದಕ್ಕಿಂತ ಮುಂಚಿತವಾಗಿ ಒಂದು ಸಲ ತವಾಫ್ ಮಾಡಬೇಕಾಗಿದೆ. ಇದನ್ನು ವಿದಾಯದ ತವಾಫ್ طَوَافُ الْوَدَاعِ ಎಂದು ಹೇಳಲಾಗುವುದು. ಪ್ರಯಾಣದ ಸಿದ್ಧತೆ ನಡೆಸಿದ ಬಳಿಕ ಮಕ್ಕಾವನ್ನು ತೊರೆಯುವುದಕ್ಕಿಂತ ಮುಂಚೆ ಕೊನೆಯದಾಗಿ ಈ ತವಾಫನ್ನು ಮಾಡಬೇಕಾಗಿದೆ. ಇದು ಹಜ್ಜ್ ಕರ್ಮಗಳಲ್ಲಿ ಸೇರಿದೆ.

ಇಹ್ರಾಮ್ ಮೀಕಾತ್‌ನಲ್ಲಿಯೇ ಧರಿಸಬೇಕು. ಮಿನಾದಲ್ಲಿ 10,11,12 ಈ ಮೂರು ದಿವಸ ತಂಗಬೇಕು. ಅರಫಾದಂದು ರಾತ್ರಿ ಮುಝ್ದಲಿಫಾದಲ್ಲಿ ವಾಸಿಸಬೇಕು. ಜಮ್ರದಲ್ಲಿ ಕಲ್ಲೆಸೆಯುವುದು, ಕೂದಲು ಕತ್ತರಿಸುವುದು, ತವಾಫುಲ್ ವಿದಾಅ್ ಎಂಬುದು ಹಜ್ಜ್‌ನ (ವಾಜಿಬ್) ಕಡ್ಡಾಯ ವಿಧಿಗಳಾಗಿವೆ.

## ನಾವೇನು ಕಲಿತೆವು

1. ಹಜ್ಜ್ ನಿರ್ವಹಿಸುವ ವಿಧಾನವನ್ನು ಕಲಿತೆವು.
2. ಹಜ್ಜ್‌ಗೂ ಉಮ್ರಾಗಳಿಗೂ ಜೊತೆಯಾಗಿ ಮತ್ತು ಪ್ರತ್ಯೇಕವಾಗಿ ಇಹ್ರಾಮ್ ಕಟ್ಟಬಹುದು.
3. ಅರಫಾದಿಂದ ಮುಝ್ದಲಿಫಾದ ದಾರಿಯಿಂದ ಮಿನಾಕ್ಕೆ ತಲುಪಿ ಜಮ್ರಾದಲ್ಲಿ ಕಲ್ಲೆಸೆಯಬೇಕು.

4. ಯೌಮುನ್ನಹರ್‌ನಿಂದ ಹಿಡಿದು 3 ದಿವಸಗಳ ಕಾಲ ಮಿನಾದಲ್ಲಿ ವಾಸಿಸಿ ಜಮ್ರಾಗಳಲ್ಲಿ ಕಲ್ಲೆಸೆಯಬೇಕು. ಇದನ್ನು ಎರಡು ದಿವಸಗಳಿಗೆ ಸಂಕ್ಷಿಪ್ತಗೊಳಿಸಿ ದುಲ್‌ಹಜ್ಜ್ 12ಕ್ಕೆ ಹಜ್ಜನ್ನು ಪೂರ್ಣಗೊಳಿಸಿ ಮರಳಬಹುದಾಗಿದೆ.

ಅಭ್ಯಾಸ

1. ಮಕ್ಕಾದಲ್ಲಿ ವಾಸಿಸುವವರು ಹಜ್ಜ್‌ಗೆ ಎಲ್ಲಿಂದ ಇಹ್ರಾಮನ್ನು ಧರಿಸಬೇಕಾಗಿದೆ?
2. ಮುಝ್ದಲಿಫಾದಿಂದ ಎಲ್ಲಿಗೆ ಹೋಗಬೇಕಾಗಿದೆ?
3. ದುಲ್‌ಹಜ್ಜ್ 10ಕ್ಕೆ ಎಲ್ಲಿಂದ ಕಲ್ಲೆಸೆಯಬೇಕು?
4. "ತವಾಫುಲ್ ವಿದಾಅ್" ಎಂದರೇನು? ಯಾವಾಗ ಅದನ್ನು ನಿರ್ವಹಿಸಬೇಕಾಗಿದೆ?

## ಪಾಠ-17

# ಉಮ್ರಾ
# العمرة

ಹಜ್ಜ್‌ನಂತೆ, ಸಾಮರ್ಥ್ಯವಿರುವವರು ಜೀವನದಲ್ಲೊಮ್ಮೆಯಾದರೂ ಉಮ್ರಾವನ್ನು ನಿರ್ವಹಿಸುವುದು ಕಡ್ಡಾಯವಾಗಿದೆ.

وَأَتِمُّوا الْحَجَّ وَالْعُمْرَةَ لِلَّهِ

"ಅಲ್ಲಾಹನಿಗಾಗಿ ಹಜ್ಜ್ ಉಮ್ರಾಗಳನ್ನು ನಿರ್ವಹಿಸಿರಿ" ಇಹ್ರಾಮ್, ತವಾಫ್, ಸಅ್‌ಯ್, ಕೂದಲು ತೆಗೆಸುವುದು ಉಮ್ರಾದ ಕರ್ಮಗಳಾಗಿವೆ. ಹಜ್ಜ್‌ನಲ್ಲಿ ಇಹ್ರಾಮ್ ಧರಿಸುವಂತೆ ಮೀಕಾತ್‌ಗಳಲ್ಲಿ ಉಮ್ರಾಕ್ಕೂ ಇಹ್ರಾಮ್ ಧರಿಸಬೇಕಾಗಿದೆ. ಉಮ್ರಾ ಯಾವ ಕಾಲದಲ್ಲಿಯೂ, ಯಾವ ಸಮಯದಲ್ಲಿಯೂ ನಿರ್ವಹಿಸಬಹುದು. ಹಜ್ಜ್, ಉಮ್ರಾಗಳಿಗೆ ಜಂಟಿಯಾಗಿ ಅಥವಾ ಬೇರೆ ಬೇರೆಯಾಗಿಯೂ ಇಹ್ರಾಮ್ ತೊಡಬಹುದಾಗಿದೆ. ಹಜ್ಜ್‌ನ ಪ್ರಧಾನ ಕರ್ಮವಾಗಿರುವ ಅರಫಾದಲ್ಲಿ ನಿಲ್ಲುವಿಕೆಯು ಉಮ್ರಾದಲ್ಲಿಲ್ಲ.

ಹಜ್ಜ್‌ನಂತೆಯೇ ಇಹ್ರಾಮ್‌ನ ನಂತರ ತಲ್‌ಬೀಯತ್, ದಿಕ್ರ್, ದುಆಗಳನ್ನು ಅಧಿಕಗೊಳಿಸಬೇಕಾಗಿದೆ. ಅಲ್ಲಾಹನ ಮಹಾನತೆಯನ್ನು ಸಾರುವ ಅವನ ಭವನವನ್ನು ಗೌರವಿಸುವುದಕ್ಕಾಗಿ ಉಮ್ರಾವನ್ನು ನಿರ್ವಹಿಸಲಾಗುತ್ತದೆ.

### ನಾವೇನು ಕಲಿತೆವು

1. ಹಜ್ಜ್‌ನ ರೀತಿಯಂತೆ ಉಮ್ರಾವೂ ಕಡ್ಡಾಯ ಕರ್ಮವಾಗಿದೆ.
2. ಉಮ್ರಾವನ್ನು ಯಾವ ಕಾಲದಲ್ಲಿಯು ನಿರ್ವಹಿಸಬಹುದು.
3. ಮೀಕಾತ್‌ಗಳಿಂದ ಉಮ್ರಾ ಮಾಡುವುದಕ್ಕೂ ಇಹ್ರಾಮ್‌ನಲ್ಲಿ ಪ್ರವೇಶಿಸ ಬೇಕಾಗಿದೆ.

### ಅಭ್ಯಾಸ

1. ಉಮ್ರಾದ ಘಟಕಗಳು ಯಾವುವು?

## ಪಾಠ-18

# ವಸ್ತ್ರಧಾರಣೆ

ನಮ್ಮ ಉಡುಪು ಧರಿಸುವ ರೀತಿಯು ದಿನದಿಂದ ದಿನಕ್ಕೆ ಬದಲಾವಣೆಯಾಗುತ್ತಿದೆ. ಯಾವ ರೀತಿಯ ವಸ್ತ್ರವನ್ನು ನಾವು ಆಯ್ಕೆ ಮಾಡಬೇಕೆಂದು ಯೋಚಿಸಿದ್ದೇವೆಯೇ? ನಾವು ಧರಿಸುವ ವಸ್ತ್ರ ನಮ್ಮ ಹವಾಮಾನ ಹಾಗೂ ದೇಹಾಕೃತಿಗೆ ಮತ್ತು ಸಂಸ್ಕೃತಿಗೆ ಹೊಂದಿಕೆಯಾಗುವಂತದ್ದಾಗಿರಬೇಕು.

ವಸ್ತ್ರಧಾರಣೆಯ ಶೈಲಿ ಮತ್ತು ಅದರ ವಿಧಾನದಲ್ಲಿ ಇಸ್ಲಾಮಿಗೆ ಬೇರೆಯೇ ನಿರ್ದೇಶನಗಳಿವೆ. ವಸ್ತ್ರಗಳು, ಅಲಂಕಾರ, ಸೌಂದರ್ಯ ಮುಂತಾದುವು ಅಲ್ಲಾಹನು ಮಾನವನಿಗೆ ನೀಡಿರುವ ಅನುಗ್ರಹಗಳಲ್ಲಿ ಸೇರಿದೆ. ಇತರ ಜೀವಿಗಳಿಂದ ಭಿನ್ನವಾಗಿ ಮಾನವನು ಲಜ್ಜೆಯೆಂದು ತಿಳಿದಿರುವ ನಗ್ನತೆಯನ್ನು ಮರೆಸಬೇಕೆಂದು ಇಸ್ಲಾಮ್ ಕಲಿಸುತ್ತದೆ.

ಅಲ್ಲಾಹನು ಹೇಳುತ್ತಾನೆ.

يَا بَنِي آدَمَ قَدْ اَنْزَلْنَا عَلَيْكُمْ لِبَاسًا يُوَارِي سَوْءَاتِكُمْ وَرِيشًا

"ಆದಮರ ಸಂತತಿಗಳೇ, ನಿಮ್ಮ ನಗ್ನತೆಯನ್ನು ಮರೆಸುವುದಕ್ಕೂ ಅಲಂಕಾರಕ್ಕಾಗಿಯೂ ನಾವು ವಸ್ತ್ರವನ್ನು ನೀಡಿದ್ದೇವೆ."

ವಸ್ತ್ರಧಾರಣೆಯ ಉದ್ದೇಶವೇ ನಗ್ನತೆಯನ್ನು ಮರೆಸುವುದು ಮತ್ತು ಅಲಂಕಾರವಾಗಿದೆ. ಇಸ್ಲಾಮ್ ಸ್ವಚ್ಛತೆ ಮತ್ತು ಸೌಂದರ್ಯದ ಧರ್ಮವಾಗಿದೆ. ಅದು ಗೌರವಾರ್ಹವೂ ಸುಂದರವೂ ಆದ ವಸ್ತ್ರಗಳನ್ನು ಧರಿಸುವುದನ್ನು ಸೂಚಿಸಿದೆ.

ಜುಮುಅ, ಈದ್ ದಿವಸಗಳಲ್ಲಿ ಸ್ವಚ್ಛ ಮತ್ತು ಸುಂದರವಾದ ವಸ್ತ್ರಗಳನ್ನು ಧರಿಸಬೇಕೆಂದು ಪ್ರವಾದಿವರ್ಯರು(ಸ) ಸೂಚಿಸಿದ್ದಾರೆ. ಆದರೆ ಉಡುಪು ಮತ್ತು ಆಭರಣಗಳನ್ನು ಧರಿಸಿ ಅಹಂಭಾವ, ಹೆಮ್ಮೆ ಪಡಬಾರದು. ಮೊಣಗಂಟಿನ ಕೆಳಗೆ ಉಡುಪನ್ನು ಎಳೆಯುತ್ತಾ ನಡೆಯುವುದನ್ನು ಪ್ರವಾದಿವರ್ಯರು(ಸ) ಅಹಂಭಾವದ ಲಕ್ಷಣವೆಂದು ಕಲಿಸಿದ್ದಾರೆ.

لَا يَنْظُرُ اللّٰهُ اِلَى مَنْ جَرَّ ثَوْبَهُ خُيَلَاءَ

"ಅಹಂಭಾವದಿಂದ ಉಡುಪನ್ನು ಎಳೆಯುತ್ತಾ ನಡೆಯುವವನನ್ನು ಅಲ್ಲಾಹನು ನೋಡುವುದಿಲ್ಲ"

**ಪುರುಷರು ಮತ್ತು ಮಹಿಳೆಯರ ವಸ್ತ್ರಧಾರಣೆಯ ವಿಧಾನ:** ಸ್ತ್ರೀ ಪುರುಷರಿಗೆ ಭಿನ್ನ ದೇಹ ಪ್ರಕೃತಿ ಮತ್ತು ಪ್ರತ್ಯೇಕತೆಗಳಿವೆ. ಪುರುಷನು ತನ್ನ ಪೌರುಷಕ್ಕೆ ಸರಿ ಹೊಂದುವ ವಸ್ತ್ರವನ್ನು ಧರಿಸಬೇಕಾಗಿದೆ. ಸ್ತ್ರೀಗಳಂತೆ ಬಟ್ಟೆ ಧರಿಸಬಾರದು. ರೇಷ್ಮೆ ವಸ್ತ್ರ ಮತ್ತು ಬಂಗಾರದ ಆಭರಣಗಳನ್ನು ಪುರುಷರು ಉಪಯೋಗಿಸುವುದು ನಿಷಿದ್ಧವಾಗಿದೆ.

ಒಮ್ಮೆ ಪ್ರವಾದಿವರ್ಯರು(ಸ) ಬಲಗೈಯಲ್ಲಿ ರೇಷ್ಮೆ, ಎಡಗೈಯಲ್ಲಿ ಬಂಗಾರವನ್ನು ಹಿಡಿದು ಹೇಳಿದರು,

إِنَّ هَذَيْنِ حَرَامٌ عَلَى ذُكُورِ أُمَّتِي (ابو داود، نسائی)

ಇವೆರಡೂ ನನ್ನ ಸಮುದಾಯದ ಪುರುಷರಿಗೆ ನಿಷಿದ್ಧವಾಗಿದೆ. ಪುರುಷರಿಗೆ ಬೆಳ್ಳಿಯ ಉಂಗುರವನ್ನು ಬಳಸಬಹುದು. ಪ್ರವಾದಿವರ್ಯರು(ಸ) ಬೆಳ್ಳಿಯ ಮೊಹರು ಉಂಗುರವನ್ನು ಧರಿಸಿದ್ದರು.

ಮಹಿಳೆಯರು ಮುಖ ಮತ್ತು ಮುಂಗೈಗಳನ್ನು ಹೊರತುಪಡಿಸಿ ಇಡೀ ಶರೀರದ ಭಾಗಗಳನ್ನು ಮುಚ್ಚುವ ವಸ್ತ್ರಗಳನ್ನು ಧರಿಸಬೇಕು. ಶರೀರ ಕಾಣುವ ಪಾರದರ್ಶಕ ಬಟ್ಟೆಯನ್ನು ಅವರು ಧರಿಸುವಂತಿಲ್ಲ. ಹೊರಹೋಗುವ ಸಮಯದಲ್ಲಿ ಶಾರೀರಿಕ ಸೌಂದರ್ಯ ಗೋಚರಿಸದಿರುವಂತೆ ಮತ್ತು ಪುರುಷರ ದೃಷ್ಟಿಬೀಳದಿರಲು ನಿಲುವಂಗಿ(ಹೊದಿಕೆ ಪರ್ದಾ) ಧರಿಸಬೇಕಾಗಿದೆ.

ಸಪ್ಪಳ(ಗೆಜ್ಜೆಯ) ಮೂಡಿಸುವ ಆಭರಣಗಳನ್ನು ಧರಿಸಿ, ಸುಗಂಧ ದ್ರವ್ಯಗಳನ್ನು ಶರೀರಕ್ಕೆ ಪೂಸಿ ಮಹಿಳೆಯರು ಹೊರ ಹೋಗಬಾರದು. ಪುರುಷರ ನಡುವೆ ಮಹಿಳೆಯರು ಮಿಲನ ಮತ್ತು ಪರಸ್ಪರ ಹೋಲುವ ಬಟ್ಟೆ ಬರೆ ಧರಿಸುವುದು ನಿಷಿದ್ಧವಾಗಿದೆ.

ರೇಷ್ಮೆ, ಬಂಗಾರಗಳನ್ನು ಹಿತಮಿತವಾದ ರೀತಿಯಲ್ಲಿ ಬಳಸುವುದಕ್ಕೆ ಮಹಿಳೆಯರಿಗೆ ಅನುಮತಿಯಿದೆ. ಬಂಗಾರ ಬೆಳ್ಳಿ ಪಾತ್ರೆಗಳನ್ನು ಬಳಸುವುದು ಮತ್ತು ಅವುಗಳಿಂದ ಅಲಂಕರಿಸುವುದು ನಿಷಿದ್ಧವಾಗಿದೆ. ಈ ಎರಡು ಲೋಹದ ಪಾತ್ರೆಗಳಲ್ಲಿ ತಿನ್ನುವವನ ಹೊಟ್ಟೆಯೊಳಗೆ ನರಕಾಗ್ನಿ ಇಳಿಯುವುದೆಂದು ಪ್ರವಾದಿವರ್ಯರು(ಸ) ಹೇಳಿದ್ದಾರೆ.

ಯಾವ ವಿಷಯದಲ್ಲಿಯೂ ಅತಿಯಾದ ಖರ್ಚನ್ನು(ದುಂದು ವೆಚ್ಚ) ಇಸ್ಲಾಮ್ ಬಯಸುವುದಿಲ್ಲ. ದುಂದುವೆಚ್ಚ ಮಾಡುವವನು ಪಿಶಾಚಿಯ ಸಂಗಡಿಗರಾಗಿದ್ದಾರೆ.

إِنَّ الْمُبَذِّرِينَ كَانُوا إِخْوَانَ الشَّيَاطِينِ

## ಕೃತಕ ಅಲಂಕಾರ

ಅಲ್ಲಾಹನ ಸೃಷ್ಟಿಯಲ್ಲಿ ಬದಲಾವಣೆ ತರುವ ರೀತಿಯ ಕೃತಕ ಅಲಂಕಾರವನ್ನು ಇಸ್ಲಾಮ್ ನಿಷೇಧಿಸಿದೆ. ಆದರೆ ಮದರಂಗಿ, ಸುರುಮ ಮುಂತಾದ ಸೌಂದರ್ಯ

ವಸ್ತುಗಳನ್ನೂ ಮಿತವಾಗಿ ಬಳಸುವುದು ಸಮ್ಮತಾರ್ಹವಾಗಿದೆ. ಟಾಲ್ಕಮ್ ಪೌಡರ್, ಸೌಂದರ್ಯ ವರ್ಧಕ ಕ್ರೀಮ್‌ಗಳು ಮುಂತಾದುವನ್ನು ಅಧಿಕವಾಗಿ ಬಳಸುವುದು ಆರೋಗ್ಯಕ್ಕೆ ಹಾನಿಕರವಾಗಿದೆ. ಆರೋಗ್ಯಕ್ಕೆ ಹಾನಿಕಾರಕವಾದ ಎಲ್ಲ ವಸ್ತುಗಳು ಇಸ್ಲಾಮಿನ ನಿಷಿದ್ಧಗಳ ಸಾಲಿಗೆ ಸೇರಿದೆ. ಮಹಿಳೆಯರು ಕೃತಕ ಕೂದಲನ್ನು ಕಟ್ಟಿಕೊಳ್ಳುವುದು. ಶರೀರದಲ್ಲಿ ಹಚ್ಚೆ ಹಾಕಿಸುವುದು. ಹುಬ್ಬುಗಳನ್ನು ತೀಡಿ ರೂಪ ಕೆಡಿಸುವುದು. ಹಲ್ಲುಗಳಿಗೆ ಸಾಣೆ ಹಿಡಿಯುವುದನ್ನು ಪ್ರವಾದಿವರ್ಯರು(ಸ) ನಿಷೇಧಿಸಿದ್ದಾರೆ.

**ನಾವೇನು ಕಲಿತೆವು**

1. ವಸ್ತ್ರದ ಉದ್ದೇಶವು ನಗ್ನತೆಯನ್ನು ಮರೆಸುವುದು ಮತ್ತು ಅಲಂಕಾರವಾಗಿದೆ.
2. ನಾವು ನಮ್ಮ ಹವಾಮಾನ, ಶರೀರ ಆಕೃತಿ ಮತ್ತು ಸಂಸ್ಕೃತಿಗೆ ಹೊಂದುವ ಬಟ್ಟೆಯನ್ನು ಧರಿಸಬೇಕಾಗಿದೆ.
3. ಸ್ತ್ರೀಯರು ಮುಖ ಮುಂಗೈಯನ್ನು ಬಿಟ್ಟು ಇಡೀ ಶರೀರವನ್ನು ಮರೆಸುವ ಬಟ್ಟೆ ಧರಿಸಬೇಕಾಗಿದೆ.
4. ರೇಷ್ಮೆ ವಸ್ತ್ರಗಳು, ಬಂಗಾರದ ಆಭರಣಗಳು ಪುರುಷರಿಗೆ ನಿಷಿದ್ಧವಾಗಿದೆ.

**ಅಭ್ಯಾಸ**

1. ವಸ್ತ್ರಧಾರಣೆಯ ಉದ್ದೇಶವೇನು?
2. ಮಹಿಳೆಯರು ಯಾವ ರೀತಿಯ ಬಟ್ಟೆ ಧರಿಸಬೇಕು?
3. ರೇಷ್ಮೆ ಬಟ್ಟೆ ಮತ್ತು ಬಂಗಾರದ ಆಭರಣಗಳನ್ನು ಬಳಸುವುದರ ಶರತ್ತೇನು?

## ಪಾಠ-19

# ಉದ್ಯೋಗ ಮತ್ತು ಹಣ ಸಂಪಾದನೆ

ಒಮ್ಮೆ ಪ್ರವಾದಿವರ್ಯರ(ಸ) ಬಳಿಗೆ ಧನ ಸಹಾಯ ಕೇಳಿ ಓರ್ವನು ಬಂದನು. ಅವನಲ್ಲಿ ಕೆಲವು ಮನೆಯ ಸಾಮಾನುಗಳನ್ನು ಬಿಟ್ಟರೆ ಬೇರೇನಿರಲಿಲ್ಲ. ಪ್ರವಾದಿವರ್ಯರು(ಸ) ಮನೆಯ ಸಾಮಾನುಗಳನ್ನು ತರುವಂತೆ ಅವನಿಗೆ ಹೇಳಿದರು. ಅದನ್ನು ಏಲಮ್ ಮಾಡಿ ಮಾರಿ ಅವನಿಗೆ ಒಂದು ಕೊಡಲಿಯನ್ನು ಖರೀದಿಸಿ ಕೊಟ್ಟರು. ಕೊಡಲಿಯಿಂದ ಕಟ್ಟಿಗೆ ಕಡಿದು ಮಾರಿ ಕುಟುಂಬದ ಹೊಟ್ಟೆ ಹೊರೆಯಬೇಕೆಂದು ಪ್ರವಾದಿವರ್ಯರು(ಸ) ಅವನಿಗೆ ಸೂಚಿಸಿದರು.

ಅದರಂತೆ ಅವನು ಕೊಡಲಿಯೊಂದಿಗೆ ಹೊರಟು ಹೋದನು. 15 ದಿವಸಗಳ ನಂತರ ಅವನು ಬಂದು ಪ್ರವಾದಿವರ್ಯರನ್ನು(ಸ) ಭೇಟಿಯಾದನು. ಆಗ ಅವನು ಸಂತೋಷಗೊಂಡಿದ್ದನು. ಕೆಲಸ ಮಾಡಿ ಸಂಪಾದಿಸಿದ 10 ದಿರ್‌ಹಮ್ ಅವನ ಕೈಯಲ್ಲಿತ್ತು. ಅದನ್ನು ನೋಡಿ ಪ್ರವಾದಿವರ್ಯರು(ಸ) ಅವನ ಹೆಗಲ ಮೇಲೆ ಕೈಯಿಡುತ್ತಾ ಹೇಳಿದರು. "ಬೇಡಿ ನೀನು ನಿಂದ್ಯನಾಗುವುದಕ್ಕಿಂತ ಇದು ನಿನಗೆ ಉತ್ತಮವಾಗಿದೆ." ಇತರರ ಔದಾರ್ಯ-ಕರುಣೆಗೆ ಕಾಯದೆ ಜೀವಿಸುವುದಕ್ಕಾಗಿ ಸ್ವಪರಿಶ್ರಮಪಡುವುದನ್ನು ಇಸ್ಲಾಮ್ ಪ್ರೋತ್ಸಾಹಿಸುತ್ತದೆ. ಸ್ವತಃ ಕೆಲಸ ಮಾಡಿ ಜೀವನ ನಡೆಸುವುದು ಗೌರವ ಮತ್ತು ಮಾನ್ಯತೆಯ ಲಕ್ಷಣವಾಗಿದೆ. ಪರಿಶ್ರಮದಿಂದ ದೊರೆಯುವ ಫಲವೇ ಅತಿ ಉತ್ತಮವಾದ ಸಂಪಾದನೆಯಾಗಿದೆ. ಪ್ರವಾದಿವರ್ಯರು(ಸ) ಹೇಳಿದ್ದಾರೆ; "ಸ್ವಂತ ಕೈಗಳಿಂದ ಕೆಲಸ ಮಾಡಿ ಸಿಕ್ಕುವ ಮಜೂರಿಯಿಂದ ಉಣ್ಣುವುದಕ್ಕಿಂತ ಉತ್ತಮವಾದ ಆಹಾರ ಬೇರೆಯಿಲ್ಲ."

ಸ್ವಂತ ಕೃಷಿ, ವ್ಯಾಪಾರ, ಇತರ ಕೃಷಿ ಸ್ಥಳಗಳಲ್ಲಿ, ವ್ಯಾಪಾರಿ ಸಂಸ್ಥೆ, ಫ್ಯಾಕ್ಟರಿಗಳಲ್ಲಿ ಕೆಲಸ ಮಾಡುವುದೆಲ್ಲವೂ ವ್ಯಾಪಾರದ ವಿವಿಧ ರೀತಿಗಳಾಗಿವೆ. ಇವೆಲ್ಲವೂ ಇಸ್ಲಾಮ್ ಅನುಮತಿಸಿದ ಹಣ ಸಂಪಾದನೆಯ ಮಾರ್ಗವಾಗಿದೆ.

### 1. ಉದ್ಯೋಗ ಹಕ್ಕುಗಳು

ಕೆಲಸಗಾರನಿಗೆ ಒಪ್ಪಿಸಲಾದ ಕೆಲಸವನ್ನು ಪ್ರಾಮಾಣಿಕತೆ ಮತ್ತು ವಿಶ್ವಾಸಾರ್ಹತೆಯಿಂದ ನಿರ್ವಹಿಸಬೇಕಾಗಿದೆ. ಕೆಲಸದ ಸಂಸ್ಥೆ ಮತ್ತು ಕೆಲಸದ ಉಪಕರಣಗಳನ್ನು ಜಾಗರೂಕತೆ ಯಿಂದ ನೋಡಿಕೊಳ್ಳುವುದು ಕಾರ್ಮಿಕನ ಬಾಧ್ಯತೆಯಾಗಿದೆ. ಕೆಲಸಕ್ಕೆ ತಕ್ಕ ಕೂಲಿ

ಪಡೆಯುವ ಹಕ್ಕು ಕಾರ್ಮಿಕನಿಗಿದೆ. ಕೆಲಸಗಾರನ ಸಾಮರ್ಥ್ಯಕ್ಕಿಂತ ಹೆಚ್ಚು ದುಡಿಸುವುದನ್ನು ಇಸ್ಲಾಮ್ ನಿಷೇಧಿಸಿದೆ. ಕಾರ್ಮಿಕನನ್ನು ಕೆಲಸಕ್ಕೆ ಗೊತ್ತುಪಡಿಸುವಾಗ ಕೂಲಿಯನ್ನು ನಿಗದಿಪಡಿಸಬೇಕಾಗಿದೆ.

اِنَّ النَّبِيَّ ﷺ نَهَى عَنْ اِسْتِئْجَارِ الْأَجِيرِ حَتَّى يَتَبَيَّنَ لَهُ اَجْرُهُ

(النسائ)

"ಕಾರ್ಮಿಕನ ಕೂಲಿಯನ್ನು ಗೊತ್ತುಪಡಿಸದೆ ಕೆಲಸಕ್ಕೆ ಇರಿಸುವುದನ್ನು ಪ್ರವಾದಿವರ್ಯರು(ಸ) ನಿಷೇಧಿಸಿದ್ದಾರೆ."

ಕೆಲಸ ಮಾಡದೆ ಅನ್ಯರ ಹಣವನ್ನು ಕಬಳಿಸುವ ಎಲ್ಲ ಮಾರ್ಗಗಳನ್ನು ಇಸ್ಲಾಮ್ ನಿಷೇಧಿಸುತ್ತದೆ. ಪರಿಶ್ರಮ ಸಂಕಷ್ಟಗಳಿಲ್ಲದೆ ಸುಲಭದಿಂದ ಹಣ ಸಂಪಾದನೆಯ ಹಲವು ರೀತಿಗಳನ್ನು ಜನರು ಅನುಸರಿಸುತ್ತಿದ್ದಾರೆ. ಜೂಜಾಟ, ಚಿಟ್ ಫಂಡ್(ಅದೃಷ್ಟ ಚೀಟಿ) ದರೋಡೆ, ಕಳ್ಳತನ ಮುಂತಾದುವು ಇದಕ್ಕೆ ಉದಾಹರಣೆಯಾಗಿದೆ. ಇವೆಲ್ಲವನ್ನೂ ಇಸ್ಲಾಮ್ ನಿಷೇಧಿಸಿದೆ.

**2. ಬಡ್ಡಿ**

ಶೇಕಡಾವಾರು ಲಾಭವನ್ನು ನಿಗದಿಪಡಿಸಿ ಸಾಲಕ್ಕೆ ಹಣ ಕೊಡುವ ಮೂಲಕ ಸಂಪಾದಿಸುವ ಆದಾಯವು ಬಡ್ಡಿಯಾಗಿದೆ. ಬಡ್ಡಿ ಪಡೆಯುವುದು, ಬಡ್ಡಿ ಕೊಡುವುದು. ಮಾತ್ರವಲ್ಲ ಅದರ ವ್ಯವಹಾರಕ್ಕೆ ಸಹಕರಿಸುವಾಗ ಮಾಡುವ ಎಲ್ಲ ಕಾರ್ಯಗಳು ಅಪರಾಧವಾಗಿದೆ. ಒಂದು ಹದೀಸ್(ವರದಿ) ಈ ರೀತಿಯಲ್ಲಿದೆ.

"ಪ್ರವಾದಿವರ್ಯರು(ಸ) ಬಡ್ಡಿ ತಿನ್ನುವವನನ್ನು ಮತ್ತು ತಿನ್ನಿಸುವವನನ್ನು, ಅದನ್ನು ಬರೆದಿರಿಸುವವನನ್ನು, ಅದಕ್ಕೆ ಸಾಕ್ಷಿ ನಿಲ್ಲುವವರನ್ನು ಶಪಿಸಿದ್ದಾರೆ. ಅವರೆಲ್ಲರೂ ಸಮಾನ ಅಪರಾಧಿಗಳಾಗಿದ್ದಾರೆ."

ಬಡ್ಡಿಯು ಪರಿಶ್ರಮಿಸದೆ ಸಿಗುವ ಸಂಪಾದನೆಯಾಗಿದೆ. ಪರಿಶ್ರಮಿಸುವ ಅಭ್ಯಾಸವಿಲ್ಲದ ಧನಿಕ ವರ್ಗ (ಶ್ರೀಮಂತರು) ಸೃಷ್ಟಿಯಾಗುವುದಕ್ಕೆ ಅದು ಕಾರಣವಾಗಿದೆ. ಮಾತ್ರವಲ್ಲ, ಬಡ್ಡಿಯ ಸಂಪ್ರದಾಯ ಜನರೊಳಗೆ ಪರಸ್ಪರ ಸಹಾಯ ಸಹಕಾರದ ಮನೋಭಾವವನ್ನು ಇಲ್ಲವಾಗಿಸುವುದು. ಬಡ್ಡಿಯನ್ನು ಈ ಕಾರಣಕ್ಕಾಗಿಯೇ ಇಸ್ಲಾಮ್ ನಿಷೇಧಿಸಿದೆ.

ಒಂದು ಬಡ್ಡಿ ರಹಿತವಾದ ಅರ್ಥ ವ್ಯವಸ್ಥೆಯನ್ನು ಇಸ್ಲಾಮ್ ಬಯಸುತ್ತಿದೆ. ಇಂದು ನಮ್ಮ ನಾಡಿನಲ್ಲಿರುವುದು ಬಡ್ಡಿಯಾಧಾರಿತ ಬ್ಯಾಂಕುಗಳು. ಕೆಲವು ಪ್ರದೇಶಗಳಲ್ಲಿ ಇಸ್ಲಾಮೀ ಕಾರ್ಯಕರ್ತರು ಬಡ್ಡಿರಹಿತ ನಿಧಿಗಳನ್ನು ಆರಂಭಿಸಿದ್ದಾರೆ. ಈಗ ಬಡ್ಡಿ ರಹಿತ ಬ್ಯಾಂಕುಗಳು ಬಹುತೇಕ ಮುಸ್ಲಿಮ್ ರಾಷ್ಟ್ರಗಳಲ್ಲಿ ಕಾರ್ಯ ಪ್ರವೃತ್ತವಾಗಿವೆ. ಹೆಚ್ಚು ಹೆಚ್ಚು ಬಡ್ಡಿ ರಹಿತ ಬ್ಯಾಂಕುಗಳನ್ನು ಯಶಸ್ವಿಯಾಗಿ ಸ್ಥಾಪಿಸಿದರೆ ಇಸ್ಲಾಮೀ ಅರ್ಥ ವ್ಯವಸ್ಥೆ ಒಂದು ಮಿತಿಯ ವರೆಗೆಯಾದರೂ ಸ್ಥಾಪಿಸುವುದಕ್ಕೆ ಸಾಧ್ಯವಾಗಬಹುದು.

ನಾವೇನು ಕಲಿತೆವು

1. ಸ್ವತಃ ಕೆಲಸ ಮಾಡಿ ಸಂಪಾದಿಸುವುದೇ ಅತಿ ಉತ್ತಮ ಸಂಪಾದನೆ.
2. ಜೂಜಾಟ, ಅದೃಷ್ಟ ಚೀಟಿ, ಬಡ್ಡಿ, ದರೋಡೆ, ಕಳ್ಳತನಗಳನ್ನು ಇಸ್ಲಾಮ್ ನಿಷೇಧಿಸಿದೆ.
3. ಬಡ್ಡಿ ಪಡೆಯುವುದು, ಕೊಡುವುದು ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲ ಕೆಲಸಗಳು ಅಪರಾಧವಾಗಿದೆ.

ಅಭ್ಯಾಸ

1. ಉದ್ಯೋಗದ ಮಹತ್ವದ ಕುರಿತು ಪ್ರವಾದಿವರ್ಯರು(ಸ) ಕಲಿಸಿರುವುದೇನು?
2. ಇಸ್ಲಾಮ್ ಕಾರ್ಮಿಕರಿಗೆ ನೀಡುವ ಹಕ್ಕುಗಳು ಯಾವುವು?
3. ಇಸ್ಲಾಮ್ ಬಡ್ಡಿಯನ್ನು ಯಾಕೆ ನಿಷೇಧಿಸಿದೆ?

## ಪಾಠ-20

# ವ್ಯಾಪಾರ

ಉತ್ತಮವಾದ ಹಣ ಸಂಪಾದನೆಯಲ್ಲಿ ವ್ಯಾಪಾರವೂ ಒಂದಾಗಿದೆ. ಇಸ್ಲಾಮಿನ ನಿಯಮ ಮತ್ತು ಸೂಚನೆಗಳ ಪ್ರಕಾರ ವ್ಯಾಪಾರ ನಡೆಸುವವರು ಉನ್ನತ ಸ್ಥಾನದವರಾಗಿರುತ್ತಾರೆ. ಪ್ರವಾದಿವರ್ಯರು(ಸ) ಹೇಳುತ್ತಾರೆ,

أَفْضَلُ الْكَسْبِ عَمَلُ الرَّجُلِ بِيَدِهِ وَ كُلُّ بَيْعٍ مَبْرُورٍ (احمد)

"ಓರ್ವನ ಸ್ವಂತ ಕೈಗಳ ಪರಿಶ್ರಮ ಮತ್ತು ಎಲ್ಲ ಉತ್ತಮ ವ್ಯಾಪಾರಗಳು ಸಂಪಾದನೆಯಲ್ಲಿ ಶ್ರೇಷ್ಠವಾಗಿದೆ."

اَلتَّاجِرُ الصَّدُوقُ الْأَمِينُ مَعَ النَّبِيِّنَ وَالصِّدِّيقِينَ وَالشُّهَدَاء يَوْمُ الْقِيَامَة

(ترمذي، ابن ماجه)

"ಸತ್ಯಸಂಧ ಮತ್ತು ವಿಶ್ವಸ್ಥನಾದ ವ್ಯಾಪಾರಿ ಅಂತ್ಯ ದಿನದಲ್ಲಿ ಪ್ರವಾದಿಗಳು, ಸಜ್ಜನರು ಮತ್ತು ಹುತಾತ್ಮರ ಜತೆಗಿರುವವರು."

ವ್ಯಾಪಾರವು ಒಂದು ಶ್ರೇಷ್ಠವಾದ ಉಪ ಜೀವನ ಮಾರ್ಗವೆಂದು ಇದರಿಂದ ಅರ್ಥವಾಗುತ್ತದೆ. ಆದರೆ ಅದಕ್ಕೆ ಇಸ್ಲಾಮ್ ನಿಗದಿಗೊಳಿಸಿದ ನಿಬಂಧನೆಗಳನ್ನು ಪಾಲಿಸ ಬೇಕು. ಸತ್ಯಸಂಧತೆ, ವಿಶ್ವಾಸಾರ್ಹತೆ, ದೇವಭಯ, ನ್ಯಾಯ ಮುಂತಾದುವುಗಳನ್ನು ವ್ಯಾಪಾರಿಗೆ ಇರಬೇಕಾದ ಗುಣಗಳಾಗಿವೆ. ಕಪಟತನವನ್ನು ತೋರಿಸುವ ವ್ಯಾಪಾರಿಗಳನ್ನು ಅಲ್ಲಾಹನು ಮೆಚ್ಚುವುದಿಲ್ಲ. ವ್ಯಾಪಾರಿಯು ತೊರೆಯಬೇಕಾದ ಕೆಲವು ಪ್ರಮುಖ ವಿಷಯಗಳನ್ನು ಈ ಕೆಳಗೆ ನೀಡಲಾಗಿದೆ.

**1.** ಸುಳ್ಳು ಪ್ರಮಾಣ: ವಸ್ತುಗಳು ಮಾರಿ ಹೋಗಬೇಕೆಂದು ಅದು ಹೊಂದಿರದ ಗುಣಗಳಿವೆಯೆಂದು ಪ್ರಮಾಣ ಮಾಡುವುದು ಸುಳ್ಳು ಪ್ರಮಾಣವಾಗಿದೆ. ಅಪರಾಧವನ್ನು ಅಡಗಿಸುವುದು ಅಪರಾಧವೇ ಆಗಿದೆ.

ಒಮ್ಮೆ ಪ್ರವಾದಿವರ್ಯರು(ಸ) ಮದೀನದ ಬೀದಿಯಲ್ಲಿ ನಡೆಯುತ್ತಿದ್ದರು. ಅವರು ಒಂದು ದವಸದ ಅಂಗಡಿ (ಆಹಾರ ವಸ್ತುವಿರುವ ಅಂಗಡಿ)ಯ ಹತ್ತಿರಕ್ಕೆ ತಲುಪಿದರು.

ಅಂಗಡಿಯ ಎದುರು ಆಕರ್ಷಕವಾದ ರೀತಿಯಲ್ಲಿ ಹೇರಿಟ್ಟಿದ್ದ ಧಾನ್ಯದ ರಾಶಿಗೆ ಪ್ರವಾದಿವರ್ಯರು(ಸ) ಕೈಹಾಕಿ ಬಾಚಿ ನೋಡಿದರು. ಒಳಗೆ ಪಸೆಯಿದೆ. ಇದೇನು? ಎಂದು ವ್ಯಾಪಾರಿಯೊಂದಿಗೆ ಗಂಭೀರವಾಗಿ ಪ್ರವಾದಿವರ್ಯರು(ಸ) ಕೇಳಿದರು. ವ್ಯಾಪಾರಿಯು ಅಪರಾಧ ಪ್ರಜ್ಞೆಯಿಂದ ವಿನಯದ ಧ್ವನಿಯಲ್ಲಿ ಹೇಳಿದನು, "ಸಂದೇಶವಾಹಕರೇ! ನಿನ್ನೆ ಅನಿರೀಕ್ಷಿತವಾಗಿ ಮಳೆ ಸುರಿದಾಗ ಸ್ವಲ್ಪ ನೆನೆದು ಹೋದುದಾಗಿದೆ.

"ಹಾಗಿದ್ದರೆ ಜನರಿಗೆ ಕಾಣುವ ರೀತಿಯಲ್ಲಿ ನೆನೆದಿರುವುದನ್ನು ಹೊರಗೆ ತೋರಿಸಿಡ ಬಾರದೆ? ಇಂತಹ ವಂಚನೆ ನಡೆಸುವವನು ನಮ್ಮವನಲ್ಲ" ಎಂದು ಪ್ರವಾದಿವರ್ಯರು(ಸ) ವ್ಯಾಪಾರಿಗೆ ಎಚ್ಚರಿಕೆ ನೀಡಿದರು.

**2. ಅಕ್ರಮ ದಾಸ್ತಾನು:** ಕ್ಷಾಮ(ಬರ) ತಲೆದೋರಿದಾಗ ಹೆಚ್ಚು ಲಾಭಕ್ಕೆ ಮಾರಬಹುದು ಎಂದು ಸಾಮಾನುಗಳನ್ನು ದಾಸ್ತಾನು ಮಾಡುವವರು(ಸ್ಟಾಕ್ ಮಾಡುವವರು) ಇದ್ದಾರೆ. ಇದನ್ನು ಕೂಡಾ ಇಸ್ಲಾಮ್ ನಿಷೇಧಿಸುತ್ತದೆ. ಪ್ರವಾದಿವರ್ಯರು(ಸ) ಹೇಳುತ್ತಾರೆ;

مَنِ احْتَكَرَ فَهُوَ خَاطِئٌ (مسلم، ترمذی)

ಅಕ್ರಮ ದಾಸ್ತಾನುಗಾರನು ಪಾಪಿಯಾಗಿದ್ದಾನೆ.

**3. ಕಲಬೆರಕೆ;** ಸಾಮಾನಿನ ತೂಕ ಅಥವಾ ಅಳತೆಯನ್ನು ಹೆಚ್ಚಿಸುವುದಕ್ಕಾಗಿ ಕಲಬೆರಕೆ ನಡೆಸಲಾಗುತ್ತದೆ. ಇದು ಕೂಡಾ ಇಸ್ಲಾಮ್ ನಿಷೇಧಿಸುವ ವಿಚಾರಗಳಲ್ಲಿ ಸೇರಿದೆ.

**4. ಅಳತೆ ತೂಕದಲ್ಲಿ ವಂಚನೆ:** ವ್ಯಾಪಾರಿಗಳು ಅಳತೆ ತೂಕಗಳಲ್ಲಿ ವಂಚಿಸುವುದನ್ನು ಇಸ್ಲಾಮ್ ಬಹಳ ಕಠಿಣವಾಗಿ ನಿಷೇಧಿಸಿದೆ. ಜನರಿಂದ ಅಳೆದು ತೆಗೆಯುವಾಗ ಸಂಪೂರ್ಣ ಪಡೆಯುತ್ತಾರೆ ಮತ್ತು ಅಳೆದು ಅಥವಾ ತೂಕ ಮಾಡಿಕೊಡುವಾಗ ಕಡಿಮೆ ಕೊಡುತ್ತಾರೆ. ಇಂತಹ ತೂಕದಲ್ಲಿ ಕಡಿತಗೊಳಿಸಿಕೊಡುವವರಿಗೆ ನಾಶವಿದೆ(ಸೂರಾ ಮುತಫ್ಫಿಫೀನ್) "ನೀವು ಅಳತೆ ತೂಕ ಸಂಪೂರ್ಣ ನೀಡಿರಿ. ಜನರ ಹಕ್ಕಿರುವ ವಸ್ತುಗಳಲ್ಲಿ ನೀವು ಕಡಿಮೆ ಮಾಡಬೇಡಿರಿ." (ಸೂರಃ ಹೂದ್)

### ನಾವೇನು ಕಲಿತೆವು

1. ಇಸ್ಲಾಮ್‌ನ ಸಮ್ಮತಾರ್ಹ ಹಣ ಸಂಪಾದನೆಯ ಮಾರ್ಗಗಳಲ್ಲಿ ವ್ಯಾಪಾರವೂ ಒಂದಾಗಿದೆ.
2. ವ್ಯಾಪಾರದಲ್ಲಿ ಸತ್ಯಸಂಧತೆ, ವಿಶ್ವಸ್ಥತೆ, ನ್ಯಾಯವನ್ನು ಪಾಲಿಸಬೇಕು.
3. ಸುಳ್ಳು ಪ್ರಮಾಣ, ಕಲಬೆರಕೆ, ಅಳತೆ ತೂಕದಲ್ಲಿ ವಂಚನೆ ನಡೆಸುವುದು ಇವುಗಳನ್ನು ಇಸ್ಲಾಮ್ ನಿಷೇಧಿಸಿದೆ.

### ಅಭ್ಯಾಸ

1. ವ್ಯಾಪಾರಿಯಲ್ಲಿ ಇರಬೇಕಾದ ಸ್ವಭಾವ ಮತ್ತು ಗುಣಗಳು ಯಾವುವು?
2. ವ್ಯಾಪಾರದಲ್ಲಿ ತೊರೆಯಬೇಕಾದ ವಿಷಯಗಳು ಯಾವುವು?

ಪಾಠ-21

# ವಕ್ಫ್, ದಾನ, ಬಿದ್ದು ಸಿಕ್ಕಿದ ವಸ್ತುಗಳು

"ನಮ್ಮೂರಿನ ಮಸೀದಿ ವಕ್ಫಾಗಿದೆ." ಮದ್ರಸಾ ಮತ್ತು ಅದು ಇರುವ ಸ್ಥಳವು ವಕ್ಫ್ ಮಾಡಿರುವುದಾಗಿದೆ ಎಂದು ಜನರು ಹೇಳುವುದನ್ನು ನೀವು ಕೇಳಿರಬಹುದಲ್ಲವೇ? ವಕ್ಫ್ ಎಂದರೇನು ಎಂದು ನೀವು ಅರ್ಥ ಮಾಡಿರುವಿರಾ? ತಮ್ಮ ಮಾಲಿಕತ್ವದ ಸೊತ್ತುಗಳನ್ನು ಅಲ್ಲಾಹನ ತೃಪ್ತಿ ಮಾತ್ರ ಬಯಸಿ ಸಾರ್ವಜನಿಕ ಉಪಯೋಗಕ್ಕೆ ಮೀಸಲಾಗಿಡುವುದನ್ನು 'ವಕ್ಫ್' ಎಂದು ಹೇಳಲಾಗುವುದು. ಭೂ ಸಂಪತ್ತು, ಕಟ್ಟಡಗಳು ಸ್ಥಿರವಾಗಿ ಬಳಸುವ ಉಪಕರಣಗಳು, ಗ್ರಂಥಗಳು ಮುಂತಾದುವುಗಳನ್ನು ವಕ್ಫ್ ಮಾಡಬಹುದು. ವಕ್ಫ್ ಮಾಡಿದ ವ್ಯಕ್ತಿಗೆ ಮರಣದ ಬಳಿಕ ಕೂಡಾ ಅಲ್ಲಾಹನ ಬಳಿಯಿಂದ ಪ್ರತಿಫಲವು ಲಭಿಸುತ್ತಿರುವುದು. ಶಾಶ್ವತ ದಾನವೆಂಬ ನೆಲೆಯಲ್ಲಿ ಈ ದಾನಗಳು ತುಂಬ ಪುಣ್ಯಕರವಾಗಿದೆ.

ಪ್ರವಾದಿವರ್ಯರು(ಸ) ಹೇಳುತ್ತಾರೆ.

إِذَا مَاتَ الْإِنْسَانُ انْقَطَعَ عَنْهُ عَمَلُهُ إِلَّا مِنْ ثَلَاثَةٍ صَدَقَةٍ جَارِيَةٍ أَوْ عِلْمٍ يُنْتَفَعُ بِهِ أَوْ وَلَدٍ صَالِحٍ يَدْعُو لَهُ

"ಓರ್ವ ಮಾನವ ಮೃತನಾದರೆ ಮೂರು ವಿಷಯಗಳನ್ನು ಹೊರತುಪಡಿಸಿ ಉಳಿದೆಲ್ಲ ಕರ್ಮಗಳು ಕೊನೆಗೊಂಡವು. ಖಾಯಂದಾನ(ವಕ್ಫ್), ಪ್ರಯೋಜನಕರವಾದ ಜ್ಞಾನ, ಅವನಿಗಾಗಿ ಪ್ರಾರ್ಥಿಸುವ ಉತ್ತಮ ಮಕ್ಕಳು."

ವಕ್ಫ್ ಮಾಡುವ ಸೊತ್ತು ಸಮ್ಮತಾರ್ಹವೂ ಬಳಕೆಗೆ ಯೋಗ್ಯವೂ ಮತ್ತು ಬಳಸಿದಷ್ಟು ಮುಗಿಯದ್ದು ಆಗಿರಬೇಕು. ವಕ್ಫ್ ಮಾಡುವುದು ಶಾಶ್ವತವಾಗಿರಬೇಕು. ಸಮಯಾವಧಿಯನ್ನು ನಿಗದಿಗೊಳಿಸಿ ವಕ್ಫ್ ಮಾಡುವಂತಿಲ್ಲ. ವಕ್ಫ್ ಮಾಡುವ ವ್ಯಕ್ತಿ ಬಯಸುವುದಾದರೆ, ತಾನು ಯಾವ ಉದ್ದೇಶಕ್ಕಾಗಿ ವಕ್ಫ್ ಮಾಡಿರುವೆನೆಂದು ದಾಖಲೆ ಮಾಡಿಕೊಳ್ಳಬಹುದು. ಹೀಗೆ ಉದ್ದೇಶವನ್ನು ದಾಖಲಿಸಿದ್ದ ವಕ್ಫ್ ಸೊತ್ತನ್ನು ಅದೇ ಉದ್ದೇಶಕ್ಕೆ ಬಳಸಬೇಕಾಗುವುದು. ಒಳ್ಳೆಯ ಕಾರ್ಯಗಳಿಗಾಗಿ(ಉತ್ತಮ ಕೆಲಸ) ಮಾತ್ರವೇ ವಕ್ಫ್ ಮಾಡಬಹುದು.

ಸೊತ್ತನ್ನು ವಕ್ಫ್ ಮಾಡುವುದರೊಂದಿಗೆ ಅದರ ಮಾಲಕನು ಮಾಲಕತ್ವವನ್ನು ಕಳೆದುಕೊಳ್ಳುತ್ತಾನೆ. ಆನಂತರ ಅದನ್ನು ಮಾರಲು, ಹಸ್ತಾಂತರಗೊಳಿಸಲು ಮತ್ತು ವಾರೀಸು ಸೊತ್ತನ್ನಾಗಿ ಪರಿಗಣಿಸುವಂತಿಲ್ಲ. ಆದರೆ ವಕ್ಫ್ ಮಾಡಿರುವ ವ್ಯಕ್ತಿಯು ಅದರ ಸಂರಕ್ಷಣೆಯನ್ನು ನೋಡಿಕೊಳ್ಳಬಹುದಾಗಿದೆ.

## ದಾನ ಮತ್ತು ಉಡುಗೊರೆಗಳು اَلْهِبَةُ وَالْهَدِيَةُ

ವಿಶೇಷ ಸಂದರ್ಭಗಳಲ್ಲಿ ನಾವು ನಮ್ಮ ಸಂಬಂಧಿಕರಿಗೆ ಮತ್ತು ಸ್ನೇಹಿತರಿಗೆ ಉಡುಗೊರೆಗಳನ್ನು ನೀಡುವೆವಷ್ಟೇ? ದಾನ ಮತ್ತು ಉಡುಗೊರೆಗಳು ಸಂಬಂಧವನ್ನು ಬಲಿಷ್ಠಗೊಳಿಸಲು, ಪರಸ್ಪರ ಸ್ನೇಹ ಬೆಳೆಸಲು ಪ್ರಯೋಜನವಿರುವ ವಿಚಾರಗಳಾಗಿವೆ. ಪ್ರವಾದಿವರ್ಯರು(ಸ) ಹೇಳುತ್ತಾರೆ.

تَهَادُوا تَحَابُّوا (بخاری)

"ನೀವು ಪರಸ್ಪರ ಉಡುಗೊರೆಗಳನ್ನು ಕೊಡುವವರಾದರೆ ನೀವು ಪರಸ್ಪರ ಪ್ರೀತಿಯನ್ನಿರಿಸುವವರಾಗಿರುತ್ತೀರಿ" 'ಹದ್‌ಯ' ನೀಡುವವರಿಗೆ ಬದಲಿ ವಸ್ತು ನೀಡುವುದು ಸುನ್ನತ್ತಾಗಿದೆ. ಆದರೆ ನಾವು ನೀಡುವುದಕ್ಕೆ ಪ್ರತಿಯಾಗಿ ಸಿಗಬೇಕೆಂಬ ಉದ್ದೇಶವಿರಬಾರದು. ಪ್ರವಾದಿವರ್ಯರು(ಸ) 'ಹದ್‌ಯ' ಸ್ವೀಕರಿಸುತ್ತಿದ್ದರು ಮತ್ತು ತನಗೆ ಸಿಕ್ಕಿದ್ದಕ್ಕಿಂತ ಉತ್ತಮವಾದುದನ್ನು ನೀಡುತ್ತಿದ್ದರು. ಒಂದು ವೇಳೆ ಬದಲಿ ವಸ್ತು ನೀಡುವುದಕ್ಕೆ ನಮ್ಮಲ್ಲಿ ಏನೂ ಇಲ್ಲದಿದ್ದರೆ ಆ ವ್ಯಕ್ತಿಗೆ ಕೃತಜ್ಞತೆ ಸೂಚಿಸಬೇಕು ಮತ್ತು ಪ್ರಾರ್ಥಿಸಬೇಕಾಗಿದೆ.

ಅಲ್ಲಾಹನ ಪ್ರೀತಿ ಮತ್ತು ಪ್ರತಿಫಲವನ್ನು ಬಯಸಿ ನೀಡುವುದೇ ದಾನಧರ್ಮಗಳಾಗಿವೆ. ಸಂಪನ್ನರು ಅವರ ಸಂಪಾದನೆಯಿಂದ ನಿರ್ಗತಿಕರು ಮತ್ತು ಬಡವರಿಗೆ ಆಶ್ರಿತರಿಗೆ ದಾನ ನೀಡುವ ಬಾಧ್ಯತೆಯಿರುವವರಾಗಿದ್ದಾರೆ. ದಾನ ನೀಡಿದ ಬಳಿಕ ಅದನ್ನು ಹೇಳಿಕೊಳ್ಳುವುದು ಪಾಪವಾಗಿದೆ. ಹಾಗೆ ಮಾಡುವವರಿಗೆ ಅವರು ನೀಡಿದ ದಾನದ ಪ್ರತಿಫಲವೇ ನಷ್ಟವಾಗುವುದು. ದಾನ ನೀಡಿದ ವಸ್ತುವನ್ನು ಯಾವುದೇ ಕಾರಣಕ್ಕೂ ಮರಳಿ ಕೇಳಬಾರದು.

## ಬಿದ್ದು ಸಿಕ್ಕಿದ ವಸ್ತು

ಕೆಲವೊಮ್ಮೆ ಹಣ ಅಥವಾ ಬೆಲೆ ಬಾಳುವ ವಸ್ತುಗಳು ಕಳೆದು ಹೋಗುತ್ತವೆ. ಹೀಗೆ ಕಳೆದು ಕೊಂಡಿರುವ ವಸ್ತುಗಳನ್ನು ಯಾರಾದರೂ ನೋಡಿದರೆ ಏನು ಮಾಡಬೇಕೆಂದು ಯೋಚಿಸಿದ್ದೀರಿ?

ಅಂತಹ ವಸ್ತುಗಳು ಯಾರಾದರೂ ಕೆಟ್ಟವರ ಪಾಲಾಗುವ ಅಥವಾ ವ್ಯರ್ಥವಾಗುವ ಸಾಧ್ಯತೆಗಳಿರುವುದರಿಂದ ಅದನ್ನು ನೋಡಿದವರು ಅದನ್ನು ತೆಗೆದಿರಿಸಬೇಕು. ಹೀಗೆ ಬಿದ್ದು ಸಿಕ್ಕಿದ ವಸ್ತುಗಳನ್ನು ತೆಗೆದುಕೊಳ್ಳುವವರು ಅದನ್ನು ಸೂಕ್ತ ರೀತಿಯಲ್ಲಿ ತೆಗೆದಿರಿಸಿ ಅದರ ಮಾಲಕನನ್ನು ಕಂಡು ಹುಡುಕಿ ಅವನಿಗೆ ಕೊಡುವುದು ಕಡ್ಡಾಯವಾಗಿದೆ.

ಅದರ ಮಾಲಕನನ್ನು ಕಂಡು ಹುಡುಕುವುದಕ್ಕಾಗಿ ಜನರು ತಿಳಿಯುವಂತೆ ಪ್ರಚಾರ ಮಾಡಬೇಕು. ತನ್ನ ಪುರಾವೆಯೊಂದಿಗೆ ಅದರ ಮಾಲಿಕ ಬಂದರೆ ಆ ವಸ್ತುವನ್ನು ಅವನಿಗೆ ಕೊಡಬೇಕು. ಸೂಕ್ತವಾಗಿ ಪ್ರಕಟಿಸಿಯೂ ವಸ್ತುವಿನ ಮಾಲಕನು ಬರದಿದ್ದರೆ ವಸ್ತುವಿನ ಗುರುತುಗಳನ್ನು ಗುರುತಿಸಿ ಆನಂತರ ಅದನ್ನು ಉಪಯೋಗಿಸಬಹುದಾಗಿದೆ. ಆದರೆ ಅದರ ಮಾಲಕನು ಹುಡುಕುತ್ತಾ ಬಂದಾಗ ಅವನಿಗೆ ಮರಳಿಸಬೇಕು. ಪ್ರಮುಖವಲ್ಲದ ಅಥವಾ ಬೇಗನೇ ಹಾಳಾಗುವ ಆಹಾರ ವಸ್ತುವೇನಾದರೂ ಬಿದ್ದು ಸಿಕ್ಕಿದ್ದರೆ ಅದು ಸಿಕ್ಕಿದ ವ್ಯಕ್ತಿಯೇ ಬಳಸಬಹುದಾಗಿದೆ. ಅದನ್ನು ಬಹಿರಂಗವಾಗಿ ಪ್ರಕಟಿಸುವುದು ಕಡ್ಡಾಯವಲ್ಲ. ಆದರೆ ಬೆಲೆ ಬಾಳುವ ವಸ್ತುಗಳು ಬಿದ್ದು ಸಿಕ್ಕಿದರೆ, ಮಾಲಕರು ಪತ್ತೆಯಾಗುವ ಮುಂಚೆ ಹಾಳಾಗ ಬಹುದೆಂದಾದರೆ ಅದನ್ನು ಮಾರಿ ಅದರ ಮೊತ್ತವನ್ನು ತೆಗೆದಿಟ್ಟುಕೊಳ್ಳಬೇಕು ಮತ್ತು ಅದರ ಮಾಲಕರು ಬಂದರೆ ನೀಡಬೇಕಾಗಿದೆ.

**ನಾವೇನು ಕಲಿತೆವು**

1. ವಕ್ಫ್ ಮರಣದ ಬಳಿಕವೂ ಲಭಿಸುವ ಪುಣ್ಯ ಕರ್ಮವಾಗಿದೆ.
2. ವಕ್ಫ್ ಸೊತ್ತಿನಲ್ಲಿ ವಕ್ಫ್ ಮಾಡಿದ ವ್ಯಕ್ತಿಗೆ ಮಾಲಕತ್ವದ ಹಕ್ಕಿಲ್ಲ.
3. ಉಡುಗೊರೆಗಳನ್ನು ನೀಡುವುದು ಪರಸ್ಪರ ಪ್ರೀತಿ ವೃದ್ಧಿಯಾಗಲು ಕಾರಣವಾಗುತ್ತದೆ.
4. ಬಿದ್ದು ಸಿಕ್ಕಿದ ವಸ್ತುವಿನ ನಿಜವಾದ ಒಡೆಯನನ್ನು ಹುಡುಕಿ ಅದನ್ನು ಮರಳಿಸಬೇಕಾಗಿದೆ.

**ಅಭ್ಯಾಸ**

1. ವಕ್ಫ್ ಎಂದರೇನು?
2. ದಾನ ಮತ್ತು ಉಡುಗೊರೆಯಿಂದ ಲಭಿಸುವ ಪ್ರಯೋಜನವೇನು?
3. ಬಿದ್ದು ಸಿಕ್ಕಿದ ವಸ್ತುಗಳನ್ನು ನಿಭಾಯಿಸುವುದು ಹೇಗೆ?

**ನೀವು ಮಾಡಬೇಕಾದ್ದು:**

1. ನಿಮ್ಮ ಊರಿನ ವಕ್ಫ್ ಸೊತ್ತುಗಳು ಯಾವುವು? ಅದನ್ನು ವಕ್ಫ್ ಮಾಡಿದವರು ಯಾರು? ಯಾವ ಉದ್ದೇಶಕ್ಕಾಗಿ ಅವರು ಅದನ್ನು ವಕ್ಫ್ ಮಾಡಿದ್ದಾರೆ ಎಂಬ ವಿಷಯವನ್ನು ವಿಚಾರಿಸಿ ತಿಳಿದುಕೊಳ್ಳಿರಿ.

## ಪಾಠ-22

# ಸಾಲ ವ್ಯವಹಾರ

ಮಾನವನು ಎಷ್ಟೇ ಸಮರ್ಥನಾದರೂ ಕೆಲವು ವೇಳೆ ಬೇರೆಯವರ ಆಶ್ರಯವನ್ನು ಪಡೆಯಬೇಕಾಗುವುದು. ಹೀಗೆ ತನ್ನ ಆಶ್ರಯವನ್ನು ಹುಡುಕಿ ಬಂದ ವ್ಯಕ್ತಿಗೆ ಸಹಾಯ ಮಾಡುವುದು ಮುಸ್ಲಿಮನ ಬಾಧ್ಯತೆಯಾಗಿದೆ. ಕೆಲವೊಮ್ಮೆ ಈ ಸಹಾಯವನ್ನು ಸಾಲವಾಗಿ ನೀಡಿದರೆ ಸಾಕಾಗುತ್ತದೆ. ಆನಂತರ ಅದು ಆ ವ್ಯಕ್ತಿಗೆ ಮರಳಿ ಸಿಗುವುದು. ಆದರೆ ಸಾಲ ಲಭಿಸುವ ವ್ಯಕ್ತಿಗೆ ದೊಡ್ಡ ಉಪಕಾರವಾಗುವುದು. ಆದುದರಿಂದ ದಾನ ಧರ್ಮಗಳಂತೆ ಸಾಲ ನೀಡುವುದನ್ನು ಕೂಡಾ ಇಸ್ಲಾಮ್‌ನಲ್ಲಿ ಪುಣ್ಯ ಕರ್ಮವಾಗಿದೆ.

ಸಾಲ ವ್ಯವಹಾರ ಇಬ್ಬರು ವ್ಯಕ್ತಿಗಳ ನಡುವೆ ನಡೆಸಿದರೆ ಆನಂತರ ಅದು ಹಲವು ತರ್ಕಗಳಿಗೆ ಅವಕಾಶವಾಗಬಹುದು. ಆದುದರಿಂದ ಸಾಲ ವ್ಯವಹಾರವನ್ನು ಸಾಕ್ಷಿಗಳ ಮುಖಾಂತರ ನಡೆಸಬೇಕು ಮತ್ತು ಬರೆದಿರಿಸಬೇಕೆಂದು ಕುರ್‌ಆನ್ ಆದೇಶಿಸಿದೆ.

ಬರೆಯಲು ಮತ್ತು ಸಾಕ್ಷಿಗಳನ್ನು ಹೊಂದಲು ಸಾಧ್ಯವಿಲ್ಲದ ಸಂದರ್ಭವಾದರೆ ಸಾಲ ಪಡೆಯುವವನಿಂದ ಈಡಾಗಿ ಏನಾದರೂ ವಸ್ತುಗಳನ್ನು ಪಡೆಯುವುದು ಸಮ್ಮತಾರ್ಹವಾಗಿದೆ. ಪ್ರವಾದಿವರ್ಯರು(ಸ) ಒಮ್ಮೆ ಸ್ವಲ್ಪ ಆಹಾರ ವಸ್ತುಗಳನ್ನು ಓರ್ವ ಯಹೂದಿಯಿಂದ ಸಾಲ ಪಡೆದಾಗ ಅವರ ಯುದ್ಧದ ಅಂಗಿಯನ್ನು(ಕವಚ) ಒತ್ತೆಯಿರಿಸಿದ್ದರು.

ಅಡವು ಇರಿಸಿದ(ಒತ್ತೆಯಿರಿಸಿದ) ವಸ್ತುಗಳನ್ನು ಮಧ್ಯವರ್ತಿ ಅಥವಾ ಸಾಲ ನೀಡಿದವನ ಬಳಿ ಇರಿಸಬಹುದಾಗಿದೆ. ಆದರೆ ಒತ್ತೆಯಿರಿಸುವ ವಸ್ತುಗಳು ಹಾಳಾಗದಂತೆ ನೋಡಿಕೊಳ್ಳುವುದು ಅದನ್ನು ತೆಗೆದಿರಿಸುವವನ ಹೊಣೆಯಾಗಿದೆ.

ಸಾಲ ವ್ಯವಹಾರ ನಡೆಸುವ ಎರಡು ಕಡೆಯವರಿಗೂ ಪರಸ್ಪರ ನಂಬಿಕೆ ಮತ್ತು ಸಂಪೂರ್ಣ ಸಂತೃಪ್ತಿಯಿದ್ದರೆ ಚಿಕ್ಕಪುಟ್ಟ ಸಾಲ ವ್ಯವಹಾರಗಳಿಗೆ ಸಾಕ್ಷಿಗಳ ಮುಖಾಂತರ ದಾಖಲೆ ಬರೆಸಬೇಕೆಂದಿಲ್ಲ ಅಥವಾ ಯಾವುದಾದರೂ ವಸ್ತುವನ್ನು ಅಡವು ಇರಿಸಬೇಕಾಗಿಲ್ಲ.

ಸಾಲ ಪಡೆದರೆ ನಿಗದಿಗೊಳಿಸಿದ ಅವಧಿಗೆ ಮರು ಪಾವತಿಸಬೇಕಾಗಿದೆ. ಕೊಡುವ ಸಾಮರ್ಥ್ಯವಿದ್ದೂ ಕೊಡದೆ ಅವಧಿಯನ್ನು ದೀರ್ಘಗೊಳಿಸುವುದು ಪಾಪವಾಗಿದೆ. ಆದರೆ ಸಾಲ ಪಡೆದ ವ್ಯಕ್ತಿಗೆ ನಿಗದಿತ ಅವಧಿಯೊಳಗೆ ಮರು ಪಾವತಿಸುವುದು ಕಷ್ಟವಿದ್ದರೆ ಅಂತಹವರಿಗೆ ಅವಧಿಯನ್ನು ಹೆಚ್ಚಿಸಿ, ಸಾಧ್ಯವಾದಷ್ಟು ಸೌಕರ್ಯವನ್ನು ಒದಗಿಸಬೇಕು.

ತಪ್ಪು ಮತ್ತು ಪಾಪಗಳನ್ನು ಅಲ್ಲಾಹನು ಕ್ಷಮಿಸಬಹುದಾಗಿದೆ. ಆದರೆ ಓರ್ವನಿಗೆ ಕೊಡಬೇಕಾಗಿರುವ ಸಾಲವನ್ನು ಅಲ್ಲಾಹನು ಕ್ಷಮಿಸಲಾರನು. ಅದನ್ನು ಅವನಿಗೆ ಪಾವತಿಸಲೇ ಬೇಕಾಗುತ್ತದೆ. ಅಲ್ಲದಿದ್ದರೆ ಸಾಲ ಕೊಟ್ಟವನೇ ಕ್ಷಮಿಸಬೇಕಾಗುತ್ತದೆ. ಮರಣಾನಂತರ ಮೃತನ ಸೊತ್ತನ್ನು ಆತನ ಸಾಲ ತೀರಿಸಿದ ಬಳಿಕವೇ ಹಂಚಬೇಕು. ಸೊತ್ತಿಲ್ಲದ ವ್ಯಕ್ತಿ ಮೃತಪಟ್ಟಿದ್ದರೆ ಮೃತ ವ್ಯಕ್ತಿಯ ಸಾಲವನ್ನು ಪಾವತಿಸುವುದು ವಾರೀಸುದಾರರು (ಉತ್ತರಾಧಿಕಾರಿಗಳ) ಹೊಣೆಯಾಗಿರುತ್ತದೆ. ಸಾಲಗಾರ ವ್ಯಕ್ತಿ ಮೃತಗೊಂಡಾಗ ಅವರ ಜನಾಝ ನಮಾಝನ್ನು ನಿರ್ವಹಿಸಲು ಪ್ರವಾದಿವರ್ಯರು(ಸ) ನಿರಾಕರಿಸಿದ್ದರು.

ಸಹಾಬಿಗಳಿಗೆ (ತನ್ನ ಸಂಗಾತಿಗಳೊಂದಿಗೆ) ನಮಾಝ್ ನಿರ್ವಹಿಸುವಂತೆ ಸೂಚಿಸಿದರು. ಕೂಡಲೇ ಇನ್ನೋರ್ವ ವ್ಯಕ್ತಿ ಸಾಲದ ಹೊಣೆಯನ್ನು ವಹಿಸಿಕೊಂಡ ನಂತರವೇ ಪ್ರವಾದಿವರ್ಯರು(ಸ) ಮಯ್ಯಿತ್ ನಮಾಝ್ ನಿರ್ವಹಿಸಿದ್ದರು. ಸಾಲ ಎಷ್ಟು ಗಂಭೀರ ಬಾಧ್ಯತೆಯಾಗಿದೆಯೆಂದು ಇದರಿಂದ ಅರ್ಥ ಮಾಡಿಕೊಳ್ಳಬಹುದು.

ಓರ್ವರಿಗೆ ಸಾಲ ಕೊಟ್ಟ ಹೆಸರಿನಲ್ಲಿ ಅವರಿಂದ ಏನಾದರೂ ವಸ್ತು ಅಥವಾ ಸೇವೆಯನ್ನು ಪಡೆಯಬಾರದು. ಅಂದರೆ ಸಾಲ ಪಡೆದ ವ್ಯಕ್ತಿ ಮರಳಿಸುವಾಗ ಮೊದಲು ನಿಶ್ಚಯಿಸಿದ ಕರಾರು ಮತ್ತು ವ್ಯಯಸ್ಥೆಯೇನಿಲ್ಲದೆ ಹೆಚ್ಚಿನದ್ದೇನಾದರೂ ನೀಡಿದರೆ ವಿರೋಧವಿಲ್ಲ. ಪ್ರವಾದಿವರ್ಯರು(ಸ) ಈ ಸಂಪ್ರದಾಯವನ್ನು ಪ್ರೋತ್ಸಾಹಿಸಿದ್ದಾರೆ. ಪ್ರವಾದಿವರ್ಯರು(ಸ) ಒಮ್ಮೆ ಒಂದು ಒಂಟೆ ಸಾಲ ಪಡೆದಿದ್ದರು. ಆನಂತರ ಆ ಸಾಲವನ್ನು ಒಂದು ಉತ್ತಮ ಒಂಟೆಯಿಂದ ಮರಳಿಸುತ್ತಾ ಹೇಳಿದರು.

إِنَّ خُيُرَكُمْ أَحْسَنُكُم قَضَاءً

"ಅತ್ಯಂತ ಉತ್ತಮ ರೂಪದಲ್ಲಿ ಸಾಲವನ್ನು ಮರು ಪಾವತಿಸುವವನು ನಿಮ್ಮಲ್ಲಿ ಉತ್ತಮನಾಗಿದ್ದಾನೆ."

ಪಡೆದ ಸಾಲಕ್ಕಿಂತ ಹೆಚ್ಚು ನೀಡಬೇಕೆಂದು ಮುಂಚೆ ನಿಶ್ಚಯಿಸಿದ್ದರೆ ಆ ಹೆಚ್ಚುವರಿಯು ಬಡ್ಡಿಯಾಗಿದೆ. ಅದನ್ನು ಪಡೆಯುವುದು, ಕೊಡುವುದು ಅತಿ ದೊಡ್ಡ ಅಪರಾಧವೆಂದು ಪವಿತ್ರ ಕುರ್‌ಆನ್ ತಿಳಿಸಿದೆಯಷ್ಟೇ?

ನಾವು ನಮ್ಮ ಮಟ್ಟಕ್ಕೆ ಸಮಾನವಾಗಿ ಬದುಕಬೇಕಾಗಿದೆ. ಹೆಚ್ಚಿನ ವರಮಾನವಿರುವವರು ಖರ್ಚು ಮಾಡುವಂತೆ ಕಡಿಮೆ ವರಮಾನದವರು ಖರ್ಚು ಮಾಡಬಾರದು.

ವರಮಾನಕ್ಕಿಂತ ಹೆಚ್ಚು ಖರ್ಚು ಮಾಡುವುದು ಮುಸ್ಲಿಮರಿಗೆ ಭೂಷಣವಲ್ಲ. ಅತಿ ಅವಶ್ಯಕ ವಿಚಾರವಾದರೆ ಮಾತ್ರ ಬೇರೆಯವರಿಂದ ಸಾಲ ಪಡೆಯಬೇಕು. ಅನಾವಶ್ಯಕ ಕಾರ್ಯಗಳಿಗಾಗಿ ಆಡಂಬರಕ್ಕಾಗಿ ಸಾಲ ಪಡೆಯಬಾರದು. ಪ್ರವಾದಿವರ್ಯರು(ಸ) ಸಾಲ ದಿಂದ ಪಾರಾಗುವುದಕ್ಕಾಗಿ ಈ ಕೆಳಗಿನಂತೆ ಪ್ರಾರ್ಥಿಸುತ್ತಿದ್ದರು.

اَللّٰهُمَّ اِنِّى اَعُوذُ بِكَ مِنَ الْهَمِّ وَالْحَزَنِ وَالْعَجْزِ وَالْكَسَلِ وَالْجُبْنِ وَالْبُخْلِ وَضَلَعِ الدَّيْنِ وَغَلَبَةِ الرِّجَالِ (متفق عليه)

"ಅಲ್ಲಾಹನೇ ಸಂತಾಪ, ದುಃಖ, ಆಲಸ್ಯ, ಉದಾಸೀನತೆ, ಹೇಡಿತನ, ಜಿಪುಣತೆ, ಸಾಲಭಾರ, ಜನರ ಒತ್ತಡಗಳಿಂದ ನಿನ್ನಲ್ಲಿ ನಾನು ಅಭಯವನ್ನು ಯಾಚಿಸುತ್ತೇನೆ."

## ನಾವೇನು ಕಲಿತೆವು

1. ಸಾಲ ನೀಡಿ ಸಹಾಯ ಮಾಡುವುದು ದಾನದಂತೆ ಪುಣ್ಯವಾದ ಕಾರ್ಯವಾಗಿದೆ.
2. ಅತಿ ಆವಶ್ಯಕ ಕಾರ್ಯಗಳಿಗೆ ಮಾತ್ರ ಇತರರಿಂದ ಸಾಲವನ್ನು ಪಡೆಯಬಹುದಾಗಿದೆ.
3. ಸಾಲ ವ್ಯವಹಾರವನ್ನು ಸಾಕ್ಷಿಗಳ ಮುಖಾಂತರ ಬರೆದಿಟ್ಟುಕೊಳ್ಳಬೇಕು ಅಥವಾ ಅಡವು ಇರಿಸಬೇಕಾಗಿದೆ.

## ಅಭ್ಯಾಸ

1. ಸಾಲಗಾರನು ಮೃತನಾದರೆ ಆತನ ಸಾಲವನ್ನು ಯಾವ ರೀತಿ ಪಾವತಿಸಬೇಕು?
2. ಸಾಲ ವ್ಯವಹಾರ ನಡೆಸುವ ಕುರಿತು ಪವಿತ್ರ ಕುರ್‌ಆನ್ ಏನನ್ನು ಕಲಿಸಿದೆ?
3. ಸಾಲದಿಂದ ರಕ್ಷಣೆ ಹೊಂದುವ ಪ್ರಾರ್ಥನೆ ಯಾವುದು?

ಪಾಠ-23

# ಮಾದಕ ಪದಾರ್ಥಗಳು

ನೀವು ಕುಡುಕನನ್ನು ನೋಡಿಲ್ಲವೆ? ಅಶ್ಲೀಲ ಹಾಡುಗಳನ್ನು ಹಾಡುತ್ತಾ ಅನಗತ್ಯ ವಿಷಯಗಳನ್ನು ಮಾತಾಡುತ್ತಾ ನಡೆಯುವವರು! ಅವರ ಪಾದಗಳು ನೆಲದಲ್ಲಿ ನಿಂತಲ್ಲಿ ನಿಲ್ಲುವುದಿಲ್ಲ. ಕೆಲವೊಮ್ಮೆ ಕೆಸರಿನಲ್ಲಿ ಬಿದ್ದು ಹೊರಳಾಡಿ ಬಟ್ಟೆ ಕೊಳಕಾಗಿರಬಹುದು. ಉಟ್ಟ ಬಟ್ಟೆ ಬಿಚ್ಚಿ ಬೀಳುವುದನ್ನು ಕೂಡಾ ಅವರು ಅರಿಯುವುದಿಲ್ಲ. ಅವರಿಗೆ ಹುಚ್ಚು ಹಿಡಿದಿರುವುದು ಇದಕ್ಕೆಲ್ಲ ಕಾರಣವಾಗಿದೆಯೇ? ಅಲ್ಲ, ಮದ್ಯ ಮುಂತಾದ ಮಾದಕ ಪದಾರ್ಥಗಳಿಂದ ಅವರ ಬುದ್ಧಿ ಶಕ್ತಿ ನಾಶಗೊಂಡಿರುತ್ತದೆ.

ಅಲ್ಲಾಹನು ಮಾನವರಿಗೆ ಅತ್ಯಧಿಕ ಅನುಗ್ರಹಗಳನ್ನು ಕರುಣಿಸಿದ್ದಾನೆ. ಅದರಲ್ಲಿ ವಿಶೇಷ ಬುದ್ಧಿಯು ಅತಿ ಮಹತ್ತರವಾದುದು. ಬೇರೆ ಜೀವಿಗಳಿಗಿಂತ ಮಾನವರಿಗಿರುವ ಶ್ರೇಷ್ಠತೆಯೂ ಅದೇ. ಮಾದಕ ವಸ್ತುಗಳ ಸೇವನೆಯಿಂದ ಬುದ್ಧಿ ಶಕ್ತಿ ಮತ್ತು ಆರೋಗ್ಯ ಕೆಟ್ಟು ಹೋಗುವುದು. ಆರ್ಥಿಕವಾಗಿ ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿಯೂ ಅವನು ಅಧಮನಲ್ಲಿ ಅಧಮನಾಗಿ ಬಿಡುವನು. ಕೆಲವೊಮ್ಮೆ ಮದ್ಯಪಾನದಿಂದ ಕುಟುಂಬ ಸಂಬಂಧಗಳು ಕೆಟ್ಟು ಹೋಗುವುದಕ್ಕೆ ಮತ್ತು ಶಿಥಿಲಗೊಳ್ಳುವುದಕ್ಕೆ ಕಾರಣವಾಗುವುದು. ಬುದ್ಧಿ ಶಕ್ತಿಗೆ ತೊಂದರೆಯೊಡ್ಡುವ ಎಲ್ಲ ವಸ್ತುಗಳು ಮಾದಕ ವಸ್ತುಗಳಾಗಿದೆ. ಮಾದಕ ವಸ್ತುಗಳು ಉತ್ಪಾದನೆ, ಬಳಕೆ ಹಾಗೂ ಮಾರಾಟವನ್ನು ಇಸ್ಲಾಮ್ ಕಠಿಣವಾಗಿ ನಿಷೇಧಿಸಿದೆ. ಅಲ್ಲಾಹನು ಹೇಳುತ್ತಾನೆ.

إِنَّمَا يُرِيدُ الشَّيْطَانُ أَنْ يُوقِعَ بَيْنَكُمُ الْعَدَاوَةَ وَالْبَغْضَاءَ فِي الْخَمْرِ
وَالْمَيْسِرِ وَيَصُدَّكُمْ عَنْ ذِكْرِ اللَّهِ وَعَنِ الصَّلَوٰةِ فَهَلْ أَنْتُمْ مُنْتَهُونَ

"ಶೈತಾನನು ಮದ್ಯ ಮತ್ತು ಜೂಜಿನ ಮೂಲಕ ನಿಮ್ಮೊಳಗೆ ವೈರತ್ವ ಮತ್ತು ದ್ವೇಷವನ್ನು ಉಂಟು ಮಾಡಲಿಕ್ಕೂ ನಿಮ್ಮನ್ನು ಅಲ್ಲಾಹನ ಸ್ಮರಣೆ ಮತ್ತು ನಮಾಝ್ ನಿಂದ ತಡೆಯಲಿಕ್ಕೂ ಇಚ್ಛಿಸುತ್ತಾನೆ. ಇನ್ನಾದರೂ ನೀವು ಅವುಗಳನ್ನು ತ್ಯಜಿಸುವಿರಾ?"

ಹೆಚ್ಚು ಪ್ರಮಾಣದಲ್ಲಿ ಸೇವಿಸಿದರೆ ಅಮಲೇರುವ ವಸ್ತುಗಳನ್ನು ಚಿಕ್ಕ ಪ್ರಮಾಣದಲ್ಲಿ ಬಳಸುವುದೂ ನಿಷಿದ್ಧವಾಗಿದೆ.

ಪ್ರವಾದಿವರ್ಯರು(ಸ) ಹೇಳಿದರು:

مَاأَسْكَرَ كَثِيرُهُ فَقَلِيلُهُ حَرَام

"ಹೆಚ್ಚು ಸೇವಿಸಿದರೆ ಯಾವುದರಿಂದ ಅಮಲಾಗುವುದೋ ಅದರಿಂದ ಸ್ವಲ್ಪ ಕೂಡಾ ಸೇವಿಸುವುದು ನಿಷಿದ್ಧವಾಗಿದೆ."

ಮದ್ಯಪಾನ ಇಸ್ಲಾಮಿ ಕಾನೂನಿನಲ್ಲಿ ಶಿಕ್ಷಾರ್ಹವಾದ ಅಪರಾಧವಾಗಿದೆ. ಅಮಲು ಪದಾರ್ಥಗಳನ್ನು ಉಪಯೋಗಿಸುವುದು ಮತ್ತು ಮಾರಾಟ ನಡೆಸುವುದು ನಿಷಿದ್ಧವಾಗಿದೆ.

**ಮಾದಕ ಪದಾರ್ಥಗಳು;** ಮದ್ಯಕ್ಕಿಂತಲೂ ಹಾನಿಕಾರಕ ಮಾದಕ ಪದಾರ್ಥಗಳಾಗಿವೆ. ಅವು ಮಾನವನ ಬುದ್ಧಿ ಮತ್ತು ಶರೀರವನ್ನು ನಾಶ ಮಾಡುತ್ತದೆ. ಈ ಪದಾರ್ಥಗಳನ್ನು ಬಳಸುವರು ಕ್ರಮೇಣ ಅದರ ದಾಸರಾಗಿ ಬಿಡುತ್ತಾರೆ. ಶಾರೀರಿಕ ಮತ್ತು ಮಾನಸಿಕ ಅಧಃ ಪತನಕ್ಕೆ ಅದು ಅವರನ್ನು ದೂಡುವುದು. ಮಾದಕ ವಸ್ತುಗಳಾಗಿ ಉಪಯೋಗಿಸುವ ಎಲ್ಲಾ ವಸ್ತುಗಳ ಮಾರಾಟ, ಖರೀದಿ, ಉತ್ಪಾದನೆ ಮತ್ತು ಉಪಯೋಗ ನಿಷಿದ್ಧವಾಗಿದೆ.

**ನಾವೇನು ಕಲಿತೆವು**

1. ಅಮಲು ಪಧಾರ್ಥಗಳು ಉತ್ಪಾದಿಸುವುದನ್ನು ಅದಕ್ಕೆ ಸಂಬಂಧಿಸಿದ ಕೆಲಸ ಮಾಡುವುದು ಮತ್ತು ಬಳಸುವುದನ್ನು ಇಸ್ಲಾಮ್ ನಿಷೇಧಿಸಿದೆ?

**ಅಭ್ಯಾಸ**

1. ಮಾದಕ ಪದಾರ್ಥಗಳನ್ನು ಸೇವಿಸುವುದನ್ನು ಇಸ್ಲಾಮ್ ನಿಷೇಧಿಸಲು ಕಾರಣವೇನು?
2. ಮಾದಕ ಪದಾರ್ಥಗಳೆಂದರೇನು?
3. ಮದ್ಯಪಾನದ ಕೆಡುಕೇನು?